# 47

# ಅಕಾಂಡ ತಾಂಡವ

(ರೇಡಿಯೋ ನಾಟಕ)



ರಚಯಿತರು:

**ಶ್ರೀ| ಬಿ. ದಾಮೋದರ ಬಾಳಿಗ, ಬಿ.ಎ.**

ಮಂಗಳೂರು.

(ಈ ನಾಟಕವು ತಾ 15-8-1955ನೇ ರಾತ್ರೆ 10ಕ್ಕೆ, ಅಖಿಲ ಭಾರತ ರೇಡಿಯೋ-ಮೈಸೂರಿನಿಂದ ಬಿತ್ತರಿಸಲ್ಪಡುವುದು.)

**1955.**

ಒಂದಾಣೆ




ಮಾಲೆ

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟಿರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು)
೮. ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. ಟಿಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ದ್ವಿ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟಿ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪು
೨೧. *ಭಾರತದ ಮಹಾನಗರಗಳು (ಭಾಗ ೧)
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು.
೨೪. ಭಾರತದ ಮಹಾನಗರಗಳು (ಭಾಗ ೨)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ)
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧ ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳು)
೩೫. ಶರಾಬಿನ ಪೀಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ
೪೦. ಆಭರಣಗಳ ಪೆಟ್ಟಿಗೆ ಇತರ ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು
೪೨. ಕಾಲುಬಳೆಯ ಕಥೆ
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು
೪೫. ಸುಭಾಷಿತ
೪೬ ೧೮೫೭ರ "ಸಿಪಾಯಿ ದಂಗೆ" ಅಥವಾ ಬ್ರಿಟಿಷರಿಗೆದುರಾಗಿ ಭಾರತೀಯರ ಸ್ವಾತಂತ್ರ್ಯಸಮರ
೪೭. ಅಕಾಂಡ ತಾಂಡವ (ರೇಡಿಯೋ ನಾಟಕ)

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ನಾಲ್ವತ್ತೇಳು ಪುಸ್ತಕಗಳಲ್ಲಿ, ನಾಲ್ವತ್ತೇಳು ಆಣೆಗಳಿಗೆ, 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 1044 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-೧

# "ಅಕಾಂಡ ತಾಂಡವ"

ಆಗೋಸ್ತು, ೧೯೪೨ ಸುಧೀರ ಬಾಬುವಿನ ಶಾಂತಿ ಶಿಬಿರದಿಂದ ದೊಡ್ಡದೊಂದು ಪ್ರಭಾತ ಫೇರಿ ಹೊರಟಿದೆ.

[ಪಲ್ಲವಿಯನ್ನು ಮಾತ್ರ ಸಾಮೂಹಿಕವಾಗಿ ಹಾಡಿ, ಉಳಿದ ವೃತ್ತವನ್ನು ಏರುಸ್ವರದಲ್ಲಿ ಗಂಭೀರವಾಗಿ ಇಬ್ಬರು ಮಾತ್ರ ಪರ್ಯಾಯ ಪ್ರಕಾರ ಮುನ್ನಡೆಯ ಗೀತವನ್ನು ಹಾಡುತ್ತಾರೆ. ದೃಢವಾದ ಹೆಜ್ಜೆಹಾಕುತ್ತಾ ಮೆರವಣಿಗೆಯ ಮುನ್ನಡೆ ಕೇಳಿಸುತ್ತದೆ.]

### ಮುನ್ನಡೆಯ ಗೀತ

(ಇಂಗ್ಲೀಷ್ ನೋಟ್).

ಹೆಜ್ಜೆ ಹೆಜ್ಜೆ ನೀಡೋ ಮುಂದೆ | ಹರುಷ ಗೀತ ಹಾಡುತ!
ರಾಷ್ಟ್ರಪರವೆ ಜೀವನ | ರಾಷ್ಟ್ರಕಾಗಿ ನೀಗೆಲೊ || ಪಲ್ಲ ||
ವೀರ ಧೈರ್ಯ ವರ್ಧಿಸೆಲವೊ | ದೇವ ನಿನ್ನ ಪಾಲಿಪ.
ನಿನ್ನ ಇದಿರು ದುಡುಕಿ ಬರುವ | ವೈರಿ ಮಣ್ಣು ಮುಕ್ಕುವ! || ೨ ||

[ದೂರದಿಂದ ಪೋಲೀಸು ವಾಹನಗಳು ಬರುವುವು. ಜೋರಾಗಿ ಮೊರೆಯುವ ಮೋಟಾರು ಇಂಜೀನುಗಳ ರವ ಸಮೀಪಕ್ಕೆ ಸರಿಯುತ್ತದೆ. ಕುದುರೆಗಳ ಖುರಪುಟ ಧ್ವನಿ ಕೇಳಿಸುತ್ತದೆ. ಪೋಲೀಸು ವಾಹನ ನಿಲ್ಲುವ ಸದ್ದು. ಕುದುರೆಗಳ ಕಾಲ ಸಪ್ಪಳವೂ ಸ್ವಲ್ಪ ಅಸ್ಪಷ್ಟವಾಗುವುದು.]

ಪೋಲಿಸ್ ಸಾರ್ಜೆಂಟ್: "Fall in."

[ಕುದುರೆ ಸವಾರರು ಲಗಾಮು ಜಗಿದು ಕುದುರೆಗಳನ್ನು ಸರಿಪಂಗ್ತಿಯಲ್ಲಿ ನಿಲ್ಲಿಸುವಾಗ ಆಗುವ ಗೊರಸಿನ ಸಪ್ಪಳ. ಒಮ್ಮೆಗೆ ಎಲ್ಲವೂ ಸ್ತಬ್ಧವಾಗುವುದು.]

ಸಾರ್ಜೆಂಟ್: ಆಜ್ಞೆಗೊತ್ತಿಲ್ಲವೇ? ಈ ಮೆರವಣಿಗೆ ಹೊರಡಿಸಿದವರಾರು?

ದಿಲೀಪ್: ನಾನು!

ಸಾರ್ಜೆಂಟ್: ಎಲ್ಲಿಗೆ ಹೊರಟಿದೆ ಇದು?

ದಿಲೀಪ್: ದೇಶಬಂಧು ಮೈದಾನಿಗೆ, ಧ್ವಜವಂದನೆಗಾಗಿ ಈ ಪ್ರಭಾತ ಫೇರಿ ಹೊರಟಿದೆ!

ಸಾರ್ಜೆಂಟ್: ಈ ಪರಬತ್ ಫೇರಿ ಮುಂದರಿಯಬಾರದು.

ದಿಲೀಪ್: ಸವಾರರಿಂದ ದಾರಿ ಅಡ್ಡಕಟ್ಟಿಸಬಹುದು! ಆದರೆ ನಾವ್ಯಾರೂ ಹಿಂಜರಿಯುವಂತಿಲ್ಲ.

ಸಾರ್ಜೆಂಟ್: ಹಾಂ! ಹಾಂ! ಉದ್ದುದ್ದ ಮಾತು!

ದಿಲೀಪ್: ಸುಧೀರ ಬಾಬುವಿನ ಶಾಂತಿ ಶಿಬಿರದ ವೀರ ಸತ್ಯಾಗ್ರಹಿಗಳು ನಾವು! ಮುಂದೆ ಇಟ್ಟ ಹೆಜ್ಜೆ ಹಿಂದೆ ತೆಗೆಯುವುದಿಲ್ಲ. ಇದು ಖಂಡಿತ!

["ಖಂಡಿತ! ಖಂಡಿತ!" ಎಂದು ಪ್ರಭಾತ ಫೇರಿಯಲ್ಲಿ ಗುಲ್ಲು ಕೇಳಿಸುವುದು.]

ಸಾರ್ಜೆಂಟ್: ನೀವೆಲ್ಲರೂ ಚಂದದಿಂದ ಹಿಂತೆರಳುವುದು ಲೇಸು!

ದಿಲೀಪ್: ಹೆಜ್ಜೆ ಹಿಂದಿಡಲು ಸಾಧ್ಯವೇ ಇಲ್ಲ!

["ಕರೆಂಗೆ.ಯಾ ಮರೇಂಗೆ''—ಎಂಬ ಒಗ್ಗೊರಳ ಘೋಷ.]

ಸಾರ್ಜೆಂಟ್: ಇದು ಅಕ್ರಮಕೂಟ! ಸಾರಿ ಸಾರಿ ಹೇಳುತ್ತೇನೆ. ಒಡನೆ ಚೆದರಿರಿ! ಚೆದರಿರಿ! ಚೆದರಿರಿ! ಮೂರೇ ಮಿನಿಟಿನೊಳಗೆ ಹೊರಡಿರಿ.

["ಕ್ವಿಟ್ ಇಂಡಿಯಾ" "ತೊಲಗು ಭಾರತಬಿಂದ" ಎಂದು ಏರುಧ್ವನಿಯ ಘೋಷಣೆಗಳು ಬಿರುಸಾಗಿ ಕೇಳಿಬರುತ್ತವೆ. ಗೊಂದಲಮಯವಾಗಿ ಹಿಮ್ಮೇಳದ ವಾದ್ಯಗಳು ಮುಂದೆ ಬರಲಿರುವ ಗಂಡಾಂತರವನ್ನು ಸೂಚಿಸುತ್ತವೆ. ಭರದಿಂದ ಬರುತ್ತಿರುವ ಪೋಲೀಸು "ಝೀಪ್" (Zeep) ಹತ್ತಿರಕ್ಕೆ ಬಂದು ನಿಲ್ಲುವ ಸದ್ದು.

ದಿಲೀಪ್: ಕಂದಾ ಕಿಶೋರ್! ಆ ತ್ರಿವರ್ಣಧ್ವಜವನ್ನು ಇಲ್ಲಿ ಕೊಡು.

ಕಿಶೋರ್: ಚಾಚಾ! ನನ್ನಲ್ಲಿಯೂ ಅಪನಂಬಿಕೆಯೇ ನಿಮಗೆ!

ದಿಲೀಪ್: ಹಾಗಲ್ಲ ಮಗೂ! ಏನೋ ದೊಡ್ಡ ಗೊಂದಲ ಆಗುವ ಸಂಭವ! ನೀನು ಹಸುಗೂಸು! ನಾಡಗುಡಿಯ ಅಭಿಮಾನದ ಹೊರೆಯನ್ನು ಕರಳವಾದ ನಿನ್ನ ಮೇಲೆ ಇರಿಸುವುದು ಸರಿಯಲ್ಲ. ಆ ಧ್ವಜವನ್ನು ನನಗೆ ಒಪ್ಪಿಸು, ಮಗೂ!

ಕಿಶೋರ್: ಇದೆಂತಹ ಮಾತು ಚಾಚಾ! "ಝಂಡಾ ಉಂಚಾ ರಹೇ ಹಮಾರಾ—"

[ಹಿಮ್ಮೇಳದ ವಾದ್ಯದವರು "ವಿಜಯೀ ವಿಶ್ವತೀ ರಂಗಾ ಪ್ಯಾರಾ''—ಎಂಬ ಧ್ವಜಗೀತೆಯನ್ನು ಗಂಭೀರವಾಗಿ ಬಾರಿಸುವರು.]

ಕಿಶೋರ್: ಈ ಧ್ವಜಗೀತೆಯನ್ನು ನಾನು ಹಾಡುವುದು ಅರ್ಥ ತಿಳಿಯದೇ ಅಲ್ಲ. ನಾನು—"ಇಸ್ ಝಂಡೇಕೆ ನಿಚೇ—ನಿರ್ಭಯ!"

[ಧೈರ್ಯ ಸ್ಥೈರ್ಯಗಳನ್ನು ಪ್ರೇರೇಪಿಸುವ ಹಿಮ್ಮೇಳದ ಸಂಗೀತ.]

ಕಿಶೋರ್: ಜೀವವಿರುವ ತನಕ ಈ ನಮ್ಮ ಪತಾಕೆಗೆ ಯಾವ ಅಪಮಾನವೂ ಬಾರದಂತೆ ನಾನೇ ನೋಡುವೆ.

ದಿಲೀಪ್: ಅಜಿತ್! ನೋಡಿದೆಯಾ—ನಿನ್ನ ಪೋರನ....ವೀರವಾಣಿ! "ಅಜಿತ್! ಎಲ್ಲಿ? ಅಜಿತ್! ಅಜಿತ್! ಇಲ್ಲವೇ?

[ಸಖೇದಾಶ್ಚರ್ಯವನ್ನು ನಿರೂಪಿಸುವ ಹಿಮ್ಮೇಳದ ಸಂಗೀತ.]

ಪೋಲೀಸ ಆಫೀಸರ: ದಿಲೀಪ್ ಸಿಂಗ್ ಎಲ್ಲಿ?

ದಿಲೀಪ್: ನಾನೇ ದಿಲೀಪ್ ಸಿಂಗ್!

ಆಫೀಸರ: ನಿಮ್ಮನ್ನು ದಸ್ತಗಿರಿ ಮಾಡಿದೆ. ಹತ್ತಿ ಈ ಝೀಪನ್ನು!

ದಿಲೀಪ್: ಭಾರತದ ಸ್ವಾತಂತ್ರ್ಯವೀರರೇ! "ಕರೇಂಗೆ ಯಾ ಮರೇಂಗೆ!" ಇದುವೇ ಮಹಾತ್ಮರಿತ್ತ ಸಂದೇಶ! ಹೋಗಿ ಬರುವೆ! ಕಂದಾ, ಕಿಶೋರ್! "ಝಂಡಾ ಉಂಚಾ ರಹೇ ಹಮಾರಾ!'' ವಂದೇ........

[—ಜನಸ್ತೋಮವಿಡೀ ''ಮಾತರಂ" ಎಂದು ಬೊಬ್ಬಿಡುವುದು. ಗುಲ್ಲು ಗದ್ದಲ ಹೆಚ್ಚುವುದು ]

ಕಿಶೋರ್ ಮತ್ತು ಸಾವಿರಾರು ಮಂದಿ:|"ಇಂಕಿಲಾಬ್ ಜಿಂದಾಬಾದ್"

ಆಫೀಸರ್: Right! Start!

[ಝೀಪಿನ ಸೆಲ್ಫ ಸ್ಟಾರ್ಟರಿನ (Self Starter) ಸದ್ದು. ಇಂಜೀನ್ ನಡೆಯುವ ಶಬ್ದ! ಜನರ ಅರ್ಭಟಿ ಇನ್ನಷ್ಟು ಹೆಚ್ಚುವುದು. ''ದಿಲೀಪ್‌ಸಿಂಗ್-ಜಿಂದಾಬಾದ್" ''ಭಾರತ ಮಾತಾಕೀ ಜೈ" ಎಂಬ ಘೋಷಣೆಗಳು ನಾಲ್ದೆಸೆಗಳಿಂದಲೂ ಎದ್ದು ಕೇಳಿಸುವುದು. ಇಂಜೀನು ಏರುಸ್ವರದಲ್ಲಿ ಮೊರೆಯುತ್ತಾ ಝೀಪ್ ಹೊರಟುಹೋಗುವುದು. ಜನಸ್ತೋಮ ''ಕ್ವಿಟ್ ಇಂಡಿಯಾ ಕ್ವಿಟ್ ಇಂಡಿಯಾ" ಎಂದು ಉದ್ಘೋಷಿಸುವುದು.]

ಸಾರ್ಜೆಂಟ್: (ಕಾಲ ಬೂಟ್ಸನ್ನು ನೆಲಕ್ಕೆ ತಟ್ಟುತ್ತಾ ಗಂಟಲು ಬಿರಿಯುವಂತೆ ಒದರುವನು) Shut up! Dis-per....se (Disperse).

ಸ್ವಯಂಸೇವಕರು: ಕಿಶೋರ್ ಬಾಬು! ಹುಶ್ಯಾರ್! ಬಂಧುಗಳೇ! ಇಲ್ಲಿದೆ ನಮ್ಮ ಸತ್ವಪರೀಕ್ಷೆ! ಸುಸಜ್ಜಿತರಾಗಿರಿ! ಕೆಚ್ಚೆದೆಯವರಾಗಿರಿ! "ಬೋಲೋ''........('ಭಾರತ ಮಾತಾಕೀ ....ಜೈ' ಎಂದು ಜನಜಂಗುಳಿ ಘರ್ಜಿಸುವುದು.)

ಸಾರ್ಜೆಂಟ್: ಜಾಗ್ರತೆ! ತೊಲಗಿ ಬೇಗ! ಇಲ್ಲದಿದ್ದರೆ ಲಾಠೀಚಾರ್ಜ!

ಕಿಶೋರ್: ವಂದೇ........("ಮಾತರಂ''........ಜನಘರ್ಜನೆ)

"ಕ್ವಿಟ್........(ಇಂಡಿಯಾ''........ಜನಘರ್ಜನೆ)
"ಕ್ವಿಟ್........(ಇಂಡಿಯಾ''........ಜನಘರ್ಜನೆ)
"ಕ್ವಿಟ್........(ಇಂಡಿಯಾ''........ಜನಘರ್ಜನೆ)
"ಭಾರತಮಾತಾಕೀ....(ಜೈ ''....ಜನಘರ್ಜನೆ)

ಸಾರ್ಜೆಂಟ್: Char—ge! (charge).

[ಕುದುರೆ ಸವಾರರು ಒಂದೇ ಸವನೆ ಮುನ್ನುಗ್ಗುವ ಶಬ್ದ! ಲಾಠೀ ಪೆಟ್ಟು.... ಬಾಲಕ ಕಿಶೋರ್ "ಭಾರತ ಮಾತಾಕೀ ಜೈ" ಎಂದು ಅರಚುವ ಆರ್ತನಾದ. ದೊಪ್ಪನೆ ಕೆಳಗೆ ಬೀಳುವ ಶಬ್ದ! 'ಅಯ್ಯೋ! ಕಿಶೋರ್‌ಬಾಬು' ಎಂದು ಕೂಗು. ಜನರು ಕಕ್ಕಾಬಿಕ್ಕಿಯಾಗಿ ಪಲಾಯನಮಾಡುವ ಗಲಭೆ. ಲಾಠೀಪೆಟ್ಟು! ಬೂಟ್ಸಿನ ತುಳಿತ! ಸ್ವಯಂಸೇವಕರು "ಭಾರತ ಮಾತಕೀ ಜೈ" ಎಂದು ಕೂಗುತ್ತಾ ಬೀಳುವರು. ಕುದುರೆಗಳ ಗೊರಸುಗಳ ಶಬ್ದ. ಪೋಲೀಸು ವಾಹನಗಳ ಮೇಲೆ ಕಲ್ಲುಗಳ ಸುರಿಮಳೆ. "ಬೊಂಬಿನ ಸ್ಫೋಟನ." ಬೆಚ್ಚಿ ಬಿದ್ದ ಕುದುರೆಗಳು ಅಡ್ಡಾದಿಡ್ಡಿ ಓಡುವ ಖುರಪುಟದ ಧ್ವನಿ. "ಹಾಯ್"! "ಅಯ್ಯೋ!" "ಸತ್ತೇ!" ಎಂದು ಪೋಲೀಸರು ಗೋಳಿಡುವರು.]

ಸಾರ್ಜೆಂಟ್: "Fire".

[ಒಂದೇ ಸವನೆ ಗುಂಡುಗಳು ಹಾರುವುವು! "ರಾಮ! ರಾಮ! ವಂದೇ ಮಾತರಂ" ಎಂಬ ಆರ್ತನಾದ ಕೇಳಿಸುವುದು. ಬಹಳ ಗಂಡಾಗುಂಡಿ!]

[ಹಿನ್ನಲೆಯಿಂದ 'ಹಿಂಡೋಲ' ರಾಗದಲ್ಲಿ ಈ ಕೆಳಗಿನ ಪದ್ಯವು ಗಂಭೀರವಾಗಿ ಕೇಳಿಬರುವುದು. ಹಿಮ್ಮೇಳದ ವಾದ್ಯಸಂಗೀತವೂ ಶೋಭೆಯನ್ನು ನಿರೂಪಿಸುವುದು. ಏರುಸ್ವರದ ಹಾಡು ದೂರದಿಂದ ಹತ್ತಿರಕ್ಕೆ ಬಂದಂತೆ ಕೇಳಿಸುವುದು.]

॥ ಪದ ॥

ದಿಕ್ತಟವ ಬಿರಿಯುತ್ತ । ಭೂಗರ್ಭ ಸೀಳುತ್ತ ।
ಘೀಳಿಡುವ ಆರ್ಭಟವಿದೇನು? ಏನು? ॥
ದಾಸ್ಯವನು ಮುಳುಗಿಸುವ । ದಾರಿದ್ರ್ಯ ಕೊಳೆ ತೊಳೆವ ।
ಮುಂಗಾರು! ಹೊಸ ಹುರುಪು! ಮೊರೆ ಏನು! ಏನು? ।

ಕ್ರಾಂತಿ ವಸನಕೆ ಮೆಚ್ಚಿ । ಭ್ರಾಂತಿ ರೊಚ್ಚೆಯ ಕೊಚ್ಚಿ । ತ್ಯಾಗವನೆ ಸಲೆ ಬೇಡಿ । ನವಕೇಳಿಯನೆ ಆಡಿ । ವಿಪ್ಲವದ ತೆರೆ ಕೀಳಿ । ಬರುತಿಹಳು ಉಚ್ಛಳಿಸಿ । ನಮ್ಮಮ್ಮ ಬರುತಿಹಳು । ಬಿಡುಗಡೆಯ ತಾಯಿ ಸ್ವಾತಂತ್ರ್ಯ ದೇವಿ!

ಅಜಿತ್: ಅದೋ ಬಂದೇ ಬಿಟ್ಟಿತು! ಪೋಲೀಸ್ ಝೀಪ್! ಹುಶ್ಯಾರ್!

[ಫಕ್ಕನೇ ಬ್ರೇಕ್ ಹಾಕಿದಾಗ ಟಾಯರುಗಳು ಮಾರ್ಗದ ಮೇಲೆ ಸವರಿ ಹೋಗುವ "ಕೊಯಾಂ" ಸದ್ದು. ಝೀಪಿನ ಇಂಜಿನೂ ಸ್ತಬ್ಧವಾಗುವುದು.]

ಆಫೀಸರು: ತಾಜಾ ಪೋಲಿಗಳು! ದಿಲೀಪ್ ಸಿಂಗ್! ನೋಡಿ ನಿಮ್ಮ ಪಾರ್ಟಿಯವರ ಕೆಲಸ! ಮಾರ್ಗದ ಮೇಲೆಲ್ಲಾ ತಂತಿಕಂಬಗಳನ್ನು ಕಿತ್ತು ಅಡ್ಡಹಾಕಿದ್ದಾರೆ! ಕಸದ ಡಬ್ಬಿಗಳ ಅಟ್ಟೆ ಕಟ್ಟಿದ್ದಾರೆ. ಗುಂಡಾಗಿರಿ!

[ಡಭ! ಡಿಭ್! ಡಭಾ! ಡೀಭ್! ನಾಲ್ಕು ಗುಂಡುಗಳನ್ನು ಹಾರಿಸಿದ ಸದ್ದು. ಝೀಪಿನ ಟಾಯರುಗಳು ಒಡೆದು ಗಾಳಿ ಬಿರುಸಾಗಿ ಸೋರಿ ಹೋಗುವ ಶಬ್ದ.]

ಅಜಿತ್: ಹುಶ್ಯಾರ್! ಸಾತಿಗಳೇ ಹುಶ್ಯಾರ್! (ನಾಲ್ಕೈದು ಮಂದಿ ಮುಂದೆ ನುಗ್ಗಿ ಝೀಪನ್ನು ಮುತ್ತುವಾಗ ಆಗುವ ಕಾಲ ಸಪ್ಪಳ.)

ಆಫೀಸರ್: ಇವರ್‍ಯಾರು? ಮುಖವಾಡ ಧರಿಸಿ ನಮ್ಮಮೇಲೆ ಏರಿ ಬರುವರು; ಪ್ರತಿಯೊಬ್ಬರ ಕೈಯಲ್ಲೂ ಗುರಿ ಇಟ್ಟ ರಿವಾಲ್ವರು!

ಅಜಿತ್: ಜೋಕೆ! ಜೋಕೆ! ನಿಮ್ಮ ಸೊಂಟದಲ್ಲಿರುವ ರಿವಾಲ್ವರು, ತೋಟಿಗಳನ್ನೆಲ್ಲಾ ಜಾಗ್ರತೆಯಾಗಿ ಕಳಚಿ ನಮಗೊಪ್ಪಿಸಿರಿ.

[ರಿವಾಲ್ವರು ತೋಟಿ ಇರುವ ಬೆಲ್ಟುಗಳನ್ನು ಕಳಚಿ ಕೆಳಕ್ಕಿಡುವ ಸದ್ದು.]

ಅಜಿತ್: ಇವನ್ನೆಲ್ಲಾ ನಮ್ಮ ಕಾರಿನಲ್ಲಿ ಮಡಗಿರಿ. ಈ ಧೂರ್ತ ಆಫೀಸರ್ ಮತ್ತು ಇವನ ಈ ಸಿಬಂಧಿಯನ್ನು ಹೆಡೆಮುಡಿ ಬಿಗಿಯಿರಿ. ಬೊಬ್ಬೆಮಾಡದಂತೆ ಬಾಯಿಗೆ ಚಿಂದಿಬಟ್ಟೆ ತುರುಕಿಸಿರಿ.

[ಬಿಗಿಲಿನ ಸಂಕೇತ. ಹಳೆ ಕಾರೊಂದು "ಗಡ ಗಡ" ಶಬ್ದ ಮಾಡುತ್ತಾ ಬರುವುದು.[

ಅಜಿತ್: ದಿಲೀಪ್ ಸಿಂಗ್, ಕಾರಿನಲ್ಲಿ ಕುಳಿತುಕೊಳ್ಳಿ. ನೋಡ್ರೋ ಮತ್ತೆ! ಆಫೀಸರ್ ಸಿಬಂಧಿಯನ್ನು ಹಿಂಬದಿಯ ಸೀಟಿನಲ್ಲಿ ಕೂಡ್ರಿಸಿ ಬಿಡ್ರೋ, ಡ್ರೈವ್ಹರ್! ನೀನೂ ಹಿಂಗಡೆಯಲ್ಲೇ ಇದ್ದುಬಿಡು, ಜಾಗ್ರತೆ!

[ಕಾರಿನ ಬಾಗಿಲುಗಳು ತೆಗೆದ ಸದ್ದು. ಜನಗಳನ್ನು ಕೂಡ್ರಿಸುವ ಸದ್ದು.]

[ಬಾಗಿಲುಗಳನ್ನು ಹಾಕಿದ ಸದ್ದು. ಕಾರಿನ Self Starterನ ಸದ್ದು. ಕಾರು ಹೊರಟುಹೋಗುವ ಗದ್ದಲ. ಹಿನ್ನೆಲೆಯಲ್ಲಿ ಉತ್ಸಾಹಸೂಚಕ ವಾದ್ಯ ಸಂಗೀತ. ಕಾರು ನಿಲ್ಲುವ ಸದ್ದು, ಬಿಗಿಲಿನ ಸಂಕೇತ! ಮನೆ ಬಾಗಿಲು ತೆಗೆದ ಸದ್ದು.]

ಅಜಿತ್: ಹುಶ್ಯಾರ್! ಸಾಥಿಗಳೇ! ಹುಶ್ಯಾರ್!

ಸಾಥಿಗಳು: "ಇಂಕಿಲಾಬ್ ಜಿಂದಾಬಾದ್."

ಅಜಿತ್: ಭಾಯಿ! ಈ ಆಫೀಸರರ ಸಿಬಂಧಿಯನ್ನು ನೆಲಮಾಳಿಗೆ ಯಲ್ಲಿ ಕೂಡಿಸಿ ಬಿಡು, ಭದ್ರ! ಇವರ ಊಟ ಉಪಚಾರವೆಲ್ಲಾ ಅಲ್ಲಿಯೇ!

ಭಾಯಿ: ಹಾಗೆಯೇ ಆಗಲಿ! ಶಹಭಾಸ್!

ದಿಲೀಪ್: ನಾನೂ ಇಲ್ಲಿ ಇಳಿಯಬೇಕೆ?

ಅಜಿತ್: ಇಲ್ಲಿ ಅಲ್ಲ! ನಾವು ಮುಂದೆ ಹೋಗುವೆವು.

[ಕಾರು ಮುಂದಕ್ಕೆ ಹೊರಡುವ ಸದ್ದು. ತೀವ್ರ ಗತಿಯಿಂದ ಕಾರು ಮುಂದ ಸಿಯುವುದು.]

ಅಜಿತ್: ಈ ಹಾಳು ಮುಖವಾಡ! ಸರಿ ಉಸಿರಾಡಲೂ ಆಗುವು ದಿಲ್ಲ! ತೊಲಗಿ ಹೋಗು! (ಆಶ್ಚರ್ಯವನ್ನು ನಿರೂಪಿಸುವ ಹಿಮ್ಮೇಳದ ವಾದ್ಯ ಸಂಗೀತ.)

ದಿಲೀಪ್: ಯಾ........ರು! ಅಜಿತ್!

ಅಜಿತ್: ಅಜಿತ್! ಹೌದು! ಅಜಿತನೇ!

ದಿಲೀಪ್: ಇದೆಲ್ಲಾ ಏನು ವ್ಯವಸ್ಥೆ ಅಜಿತ್?

ಅಜಿತ್: ನಿಮಗೆ ಅರ್ಥವಾಗುವಂತಿಲ್ಲ ದಿಲೀಪ್‌ಜೀ!—ನಮ್ಮ ತಂದೆ ಯವರಿಗಂತೂ ಇದೆಲ್ಲಾ ಶುದ್ಧ, ಪರಿಶುದ್ಧ ಅನರ್ಥ. ಆದುದರಿಂದಲೇ ಈ ವ್ಯವಸ್ಥೆಯನ್ನೆಲ್ಲಾ ನಮ್ಮಷ್ಟಕ್ಕೇ '**ನಾವೇ**' ಮಾಡಿಕೊಂಡಿದ್ದೇವೆ.

ದಿಲೀಪ್: ನಿನ್ನ ಈ ನಿಗೂಢ ವ್ಯವಸ್ಥೆ ಯಾವ ಅದೃಷ್ಟದ ಆಟವೋ! ಈ ಸುಳಿಯಲ್ಲಿ ನನ್ನನ್ನೂ ಅಯಾಚಿತವಾಗಿ ಎಳೆದೆಯಲ್ಲ, ಅಜಿತ್!

ಅಜಿತ್: ದಿಲೀಪ್‌ಸಿಂಗ್! ನೀವು ಈ ಸುಳಿಯಲ್ಲಿ ಸಿಲುಕಬೇಕಾಗಿಲ್ಲ. ಬೇಕಾದರೆ ಈಗಲೇ ಓಡಿಹೋಗಿ ಪೋಲೀಸರಿಗೆ ಶರಣುಹೋಗಿ ಮಾವನ ಮನೆಯ ಸುಖ ಅನುಭವಿಸಬಹುದು. ನಮ್ಮದೇನೂ ಅಡ್ಡಿ ಇಲ್ಲ.

ದಿಲೀಪ್: ಅಜಿತ್! ನಿನ್ನದು ಬಿಸಿರಕ್ತ. ಸಿಟ್ಟೇರಿ ದುಡುಕಿ............

ಅಜಿತ್: ಸಿಟ್ಟಿಲ್ಲ! ಗುಟ್ಟು—ಈ ಬಂಡಾಯದ ಗಂಡಾಂತರಕ್ಕಿಂತ ಸೆರೆಮನೆಯ ಮರೆಯೇ ನಮ್ಮ ಅನೇಕ ಪುಢಾರಿಗಳಿಗೆ ಲೇಸೆನಿಸಿದೆ.

ದಿಲೀಪ್: ಉದ್ವೇಗದಿಂದ ನೀನು ಏನೂ ಮಾತಾಡಿದರೂ........ ...

[ಮುಂದೆ ಓಡುವ ಕಾರು ಚರಂಡಿಗೆ ಇಳಿದ ಶಬ್ದ]

ದಿಲೀಪ್: ಮಾತಾಡಿ ಮಾತಾಡಿ ತೋಡಿಗಿಳಿಸಿ ಬಿಟ್ಟೆಯಲ್ಲಾ!

[ಕಾರಿನ ಇಂಜೀನ್ ಘೋರ್ಗರೆದು ಕಾರು, ಗಡ, ಬಡ, ಲಡ, ಬಡ್, ಎಂದು ಮುನ್ನುಗ್ಗುವ ಸದ್ದು ಕೇಳಿಸುವುದು]

ಅಜೀತ್: ದಿಲೀಪ್‌ಜೀ! ಹಾಗೇನೂ ಅಲ್ಲ! ಇನ್ನು ಈ ಕಾರನ್ನು ಈ ಕಾಡಿನ ಅಂಚಿನಲ್ಲಿ ಅಡಗಿಸಿಡಬೇಕು. ಆ ಮೇಲೆ ನಾವು ಕಾಲ್ನಡೆಯಲ್ಲಿ ಗುಪ್ತ ಕುಟೀರವನ್ನು ಸೇರುವೆವು.

[ಕಾರು ಪೊದೆಗಳ ನಡುವಿನಿಂದ ಹಾದುಹೋಗುವ ಸದ್ದು, ಕಾರು ನಿಲ್ಲುವುದು]

ಅಜೀತ್: ಡ್ರಾಯ್ವರ್! ನೀನು ಇಲ್ಲೇ ಇದ್ದು ಬಿಡು! ಏನಾದರೂ ಗಂಡಾಂತರ ಬಂದರೆ—ಬಿಗಿಲಿನ ಉದ್ದ ಸಂಕೇತ! ಹುಶ್ಯಾರ್!

೨

ಭಾರತದ ಉದ್ದಗಲದಲ್ಲಿಯೂ, ಅಗೋಸ್ತು ವಿಪ್ಲವದ ಜಂಘಾನಿಲ ಬಲವಾಗಿ ಬೀಸಿತು. ಕಳಕೊಂಡ ಸ್ವಾತಂತ್ರ್ಯವನ್ನು ಮರಳಿ ಗೆದ್ದುಕೊಳ್ಳಲು ಭಾರತದ ಜನತೆ ತೀವ್ರವಾಗಿ ಹೋರಾಡಿತು. ವೀರ ಸತ್ಯಾಗ್ರಹಿಗಳು ದಿಗಿಲುಗೊಂಡ ಸರಕಾರದ ಅಮಾನುಷ ದಬ್ಬಾಳಿಕೆಯನ್ನು ಅಹಿಂಸೆಯಿಂದಲೆ ಇದಿರಿಸಿದರು. ಲಾಠಿ ಪೆಟ್ಟುಗಳಿಗೆ ಸೇಸೆಯ ಅಕ್ಷತೆ ಎಂದೇ ತಲೆಯೊಡ್ಡಿದರು. ಸಿಡಿಗುಂಡನ್ನು ದುಂಡುಮಲ್ಲಿಗೆ ಎಂದೇ ಎದೆಯೊಡ್ಡಿ ಧರಿಸಿದರು. ಸಾವಿರಾರು ಸಂಕಷ್ಟಗಳಿಂದ ಕಂಗೆಟ್ಟು, ಮುಂಬಟ್ಟೆ ಕಾಣದ ಭಾರತದ ಜನತೆಯ ತೀಕ್ಷ್ಣ ಪ್ರತಿಕ್ರಿಯೆ ಮರಣೋನ್ಮುಖವಾದ ಸಾಮ್ರಾಜ್ಯಶಾಹಿ ಹೆಬ್ಬಾವಿನ ಅಳ್ಳೆಮೂಳೆಗಳನ್ನು ಹಿಸುಕಿತು. ತತ್ತರಿಸುವ ಸರಕಾರವು ಅಲ್ಲಸಲ್ಲದ ಅಕ್ರಮ ಅತ್ಯಾಚಾರಗಳನ್ನು ಕೈಕೊಂಡಿತು. ಅರ್ಬಿಯಂತೆ ಹಾರಿ ಜಿಗಿಯುತ್ತಿದ್ದ ಜನತೆಯ ಹೋರಾಟ ಗುಪ್ತಗಾಮಿನಿಯಾಗಿ, ಉಮಿಯೊಳಗಿನ ಬೆಂಕಿಯಂತೆ ದೇಶದ ಉದ್ದಗಲದಲ್ಲಿಯೂ ಕಾಡತೊಡಗಿತು. ಇಷ್ಟು ಭೀಕರ, ಅನಿಶ್ಚಿತ ಪರಿಸ್ಥಿತಿಯಲ್ಲಿಯೂ, ಜಿತೇಂದ್ರನಂತಹ ಸಿರಿವಂತರು ತಮ್ಮ ಬೊಕ್ಕಸ ತುಂಬುವುದರಲ್ಲಿಯೇ ನಿರತರಾಗಿದ್ದರು.

[ಟೆಲಿಫೋನಿನ ಗಂಟೆ ಜೋರಾಗಿ ಕೇಳಿಸುವುದು]

ಜವಾನ: ಹಲ್ಲೋ! ಹೆಲ್ಲೋ!................ಹೌದು. ಇದು ಸುಖನಿವಾಸ—ಜಿತೇಂದ್ರ ಸಾಬ್ರ ಬಂಗ್ಲೆ................ದಣಿಯರು ಮಹಡಿಯ ಮೇಲೆ ಇದ್ದಾರೆ. ನೀವಾರು?...............ಕಲೆಕ್ಟರ್! ದೊರೆಗಳೇ! ಅಡ್ಡಬಿದ್ದೆ, ಬುದ್ಧಿ! ಅಡ್ಡ ಬಿದ್ದೆ!....................ಹೂಂ! ಈಗಲೇ ಹೇಳಿತೀನಿ! ದೊರೆಗಳು ಮಾತಾಡ್ತಾರಂತ.

[ಟೆಲಿಫೋನ್ ಗ್ರಾಹಕವನ್ನು ಕೆಳಗಿಡುವ ಸದ್ದು—ಜವಾನ ಮಾಳಿಗೆಗೆ ಓಡುವ ಸದ್ದು. ಮಾಳಿಗೆಯಿಂದ ಕೆಳಗಿಳಿದು ಬರುವ ಬೂಟ್ಸಿನ ಕಾಲಸಪ್ಪಳ.]

ಜಿತೇಂದ್ರ: "Yes!" ಜಿತೇಂದ್ರ ಮಾತಾಡುವುದು! Good Morning........ಹಾಂ! ಹಾಂ! ಚಳವಳ ಹೇಗಾಯಿತು........ಇದ್ದಾವಲ್ಲ! ಆ ಹಳೆ ಹೆಗ್ಗಣಗಳು! ಸುಧೀರ್ ಬಾಬು, ದಿಲೀಪ್‌ಸಿಂಗ್! ಸಿದ್ದೊಪಂತ! ಜೈಲು ತುಂಬಿಸಲು...............ಹೌದು! ಅಜೀತ್ ಬಾಬು! ಸುಧೀರ್ ಬಾಬುವಿನ ಮಗ!...........ಸಿಡುಕಿನ ಪಾಂ! ದುಡುಕಿನ ಬುಡುಬುಡಿಕೆ! ಭಾರಿ ಹಟಮಾರಿ!........ಹಾಂ! ಅವನೇ ಈ ಬಂಡಾಯಕ್ಕೆ—ಮುಂದಾಳು! ............ಮಿಲಿಟರಿ ಬರುವ ವರೇಗೆ............ಏನೂ? ಹಾಂ!......... ನಾನೇನು ಮಾಡಬೇಕು?...............ಇದೆ. ಅಜಿತನ ಸಂಪರ್ಕ ನನಗೆ ಇದೆ.................ಯಾವ ವಿಧದಿಂದಲೂ ಆತನನ್ನು ಒಲಿಸಿಕೊಳ್ಳಲು ಸಾಧ್ಯವೇ ಇಲ್ಲ............ಒಂದೇ ದಾರಿ! ನಾವು ಅವನೊಡನೆ ಸೇರಿ ಕೈತವ ನಡೆಸಬೇಕು............ಸರಕಾರ ಸಂಪೂರ್ಣ.... ....ಬೆಂಬಲ ನೀಡುವುದಷ್ಟೆ? ............ಆ ಮೇಲೆ ಖಾಸಗಿಯಿಂದ ನಿಮ್ಮ ಸ್ವಂತ ಭರವಸೆ ಇದ್ದರೆ, ಒಂದು ಕೈ ನೋಡುತ್ತೇನೆ.................Hullo! Hullo!

[ಗ್ರಾಹಕವನ್ನು ಕೆಳಗೆ ಇಟ್ಟ ಸದ್ದು; ಮೇಲೆ ಮೇಲೆ ಚಿಲಕ ತಿರುಗಿಸುವ ಸದ್ದು.]

Hullo! Hullo! Exchange, Exchange!

ಜಿತೇಂದ್ರ: ಉತ್ತರವೇ ಇಲ್ಲ! ಟೆಲಿಫೋನ್ ತಂತಿಗಳನ್ನು ಕಡಿದು ಹಾಕಿರಬೇಕು. [ಮೆಲ್ಲಗೆ ಕೋಣೆಯ ಬಾಗಿಲು ತೆರೆದ ಸದ್ದು]

ಜವಾನ: ಅಜೀತ ಬಾಬು ಬರುತಿದ್ದಾರೆ! ಸಾಬ್!

ಜಿತೇಂದ್ರ: ಟೆಲಿಫೋನಿನಲ್ಲಿ ಮಾತಾಡಿದ್ದು ಅವರು ಕೇಳಲಿಲ್ಲವಷ್ಟೇ!

ಜವಾನ: ಹೊರಗಿನ ಗೇಟು ತೆಗ್ದು ಬರ್‍ತದಷ್ಟೇ ಆ ಕಾರು.

[ಕಾರು ಬಂದು, ಕಾರಿನಿಂದ ಇಳಿದು ಬರುವ ಕಾಲು ಸಪ್ಪಳ.]

ಅಜೀತ್: ಜಿತೇಂದ್ರ ಬಾಬು ಇದ್ದಾರೇನು ಒಳಗೆ?

ಜವಾನ: ಇದಾರ್‍ರೀ ಬುದ್ದೀ! ಇಲ್ಲೇ ಇದ್ದಾರೆ!

ಜಿತೇಂದ್ರ: ಓ-ಹೋ! ಹೋ! ಅಜೀತ್! ಏನೋ ಇದು ನಿನ್ನ ವೇಷ! ಬಹಳ ಆವೇಶ ಹೊಡೆದು ಕಾಣಿಸುತ್ತದಲ್ಲಾ.

ಅಜೀತ್: ಅವೇಶವಲ್ಲದೆ ಮತ್ತೇನು? ಜಿತೇಂದ್ರ, ಗಳಿಗೆ ಮೀರಿ ಹೋಗಿದೆ. ಈಗ, ಈಗ, ಈಗಲೇ, ಈಗ ಮಾಡಿದರೆ ಮಾತ್ರ—ಕಾರ್ಯ

ಸಾಧಿಸುವುದು. ಇಲ್ಲದಿದ್ದರೆ ಗಂಡಾಂತರ! ನಿನ್ನ ತಾಬೆಯಲ್ಲಿದ್ದ ಸೈನ್ಯ ಸರಂಜಾಮು ಎಲ್ಲವನ್ನು ಈಗಲೇ ನಮಗೆ ಬಿಟ್ಟು ಕೊಡಬೇಕು.

ಜಿತೇಂದ್ರ: ಅದು ಹೇಗೆ ಸಾಧ್ಯ? ನಾನು ಬರೀ ಕಂಟ್ರಾಕ್ಟರ ಮಾತ್ರ!

ಅಜೀತ್: ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕಿಂಕರ! ನನಗೆ ಗೊತ್ತು! ಆದರೆ ಮಿಲಿಟರಿ ಸೊತ್ತಿಲ್ಲ ದೇಶದ ಹೋರಾಟಕ್ಕೆ ಅತ್ಯಗತ್ಯ! ಏನು ಹೇಳುವೆ?

ಜಿತೇಂದ್ರ: ಅಜೀತ್! ಅದೂ....ಹೇಗೆ....ಆ....ಗ ಬೇಕು?

ಅಜೀತ್: ಇದು ಅಖಂಡಭಾರತದ ಅಂತಿಮ ಸ್ವಾತಂತ್ರ್ಯಹೋರಾಟ. ಭಾರತದ ಪ್ರಜಾಕೋಟಿ ಆಗುಹೋಗುಗಳನ್ನು, ಹಿಂದುಮುಂದು ನೋಡದೆ ಮುನ್ನುಗ್ಗಬೇಕು. ಈ ಸಂಧಿ ತಪ್ಪಿದರೆ ನಮ್ಮ ಬಿಂದು ಕೂಡಾ ಉಳಿಯದು.

ಜಿತೇಂದ್ರ: ಹಾಗೆಲ್ಲಾ ದುಡುಕಿದರೆ ಪರಿಣಾಮ ಭಯಂಕರವಾದೀತು ಅಜೀತ್! ಅಲ್ಲದೆ ಬಾಪೂಜೀಯ ಸತ್ಯ ಅಹಿಂಸೆಗಳಿಗೆಲ್ಲಾ ತಿಲಾಂಜಲಿಯೇ?

ಅಜೀತ್: ಇಂದು ಸಂದೇಹ ಅಂಜಿಕೆಗಳಿಗೆ ಎಡೆಯೇ ಇಲ್ಲ, ಜಿತೇಂದ್ರ! "ಮಾಡು ಯಾ ಮಡಿ"—ಇದುವೇ ಗಾಂಧೀಜಿಯ ತಾರಕಮಂತ್ರ

[ಹುರುಪು ಉತ್ಸಾಹಗಳನ್ನು ಪ್ರೇರೇಪಿಸುವ ಹಿನ್ನೆಲೆಯ ವಾದ್ಯಸಂಗೀತ. ಭಗವದ್ಗೀತೆಯ ಶ್ಲೋಕವನ್ನು ಹಿಮ್ಮೇಳದವರು ಗಂಭೀರವಾಗಿ ಹಾಡುವರು.]

|| ಶ್ಲೋಕ ||

ಹತೋ ವಾ ಪ್ರಾಪ್ಸ್ಯಸೇ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ |
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ||

ಅಜೀತ್: ಸತ್ತರೆ ವೀರಸ್ವರ್ಗ! ಗೆದ್ದರೆ ನಾಡಿಡೀ ಬಿಡುಗಡೆ!

ಜಿತೇಂದ್ರ: ಇದೆಲ್ಲಾ ಅಘೋರ, ಅಜೀತ್!

ಅಜೀತ್: ತರ್ಕವಿತರ್ಕ ಬೇಡ! ಕಾರ್ಯತತ್ಪರತೆ ಮಾತ್ರ!

[ಹಿನ್ನೆಲೆಯಲ್ಲಿ ಗೀತೆಯ ಶ್ಲೋಕ ಮೊಳಗಿ ಕೇಳಿಸುವುದು.]

ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ |
ಮಾ ಕರ್ಮಫಲಹೇತುರ್ಭೂರ್ಮಾತೇ ಸಂಗೋಽಸ್ತ್ವ ಕರ್ಮಣಿ ||

ಜಿತೇಂದ್ರ: ಆದರೆ ಗೊತ್ತುಗುರಿಯಿಲ್ಲದ ಕಾರ್ಯ ದೋಷ ದ್ರೋಹಗಳ ಉಗಮ, ತಿಳಿದಿರು ಅಜೀತ್.

ಅಜೀತ್: ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ಹೋರಾಡುವುದು ನಮ್ಮ ಧರ್ಮ! ಅನಿವಾರ್ಯ ಕರ್ತವ್ಯ! ಜನ್ಮಸಿದ್ಧ ಕರ್ಮ! ನೆಪಬೇಡ!

ಜಿತೇಂದ್ರ: ಸೈನ್ಯದ ಸೊತ್ತೆಲ್ಲಾ ಈಗಾಗಲೇ ಹೊಸ ಠಾಣೆಗಳಿಗೆ ಒಯ್ದಾಗಿದೆ ಅಜೀತ್! ನನ್ನಿಂದ ಬೇರೇನಾದರೂ ಆಗಬೇಕಾದರೆ ಹೇಳು.

ಅಜೀತ್: ಹಾಗಾದರೆ, ತನುಮನಧನಗಳನ್ನು ಪುಣ್ಯಭೂಮಿಯಾದ ಭಾರತಕ್ಕೆ ಅರ್ಪಿಸಿ ನೀನೂ ಸ್ವಾತಂತ್ರ್ಯಸಮರದ ಅಗ್ನಿಕುಂಡಕ್ಕೆ ದುಮುಕು.

[ಝೀಪ್ ಬರುವ ಸದ್ದು.]

ಜಿತೇಂದ್ರ: ಯಾರೋ ಮಿಲಿಟರಿ ಅಧಿಕಾರಿ—ಹೌದು!—ಬ್ರಿಗೇಡಿಯರ್ ಖಾನ್ ಬರುತಿದ್ದಾರೆ. (ಝೀಫ್ ಹತ್ತಿರ ಬರುವ ಸದ್ದು)

ಜಿತೇಂದ್ರ: ಅಜೀತ್! ನೀನು, ಆ ರಿಕಾರ್ಡ್ರು ಕೋಣೆ ಸೇರು.

[ಸಟಸಟನೆ ನಡೆದು ಕೋಣೆಯೊಳಕ್ಕೆ ನುಗ್ಗುಸಪ್ಪಳ. ಬಾಗಿಲು ತಟ್ಟಿದ ಸದ್ದು.]

ಜಿತೇಂದ್ರ: ಬನ್ನಿ ಬನ್ನಿ! ಬ್ರಿಗೇಡಿಯರ್!

ಬ್ರಿ. ಖಾನ್: Good Morning to you.

ಜಿತೇಂದ್ರ: Good Morning! ಏನು ಸಮಾಚಾರ?

ಬ್ರಿ. ಖಾನ್: ಟೆಲಿಫೋನ್ ಇಲ್ಲಾ—ಅಲ್ಲವೇ! ಈಗ ನೀವು ನಣ್ಣ ಜತೇಲಿ ಕಲೆಕ್ಟರ್ ಸಾಬರ ಬಂಗ್ಲೆಗೆ ಬರಬೇಕು. ಅರ್ಜೆಂಟ್!

ಜಿತೇಂದ್ರ: ಸರಿ! ಅಷ್ಟರಲ್ಲಿ ನಾನು ಕೋಟು ಸಿಕ್ಕಿಸಿ ಬರುವೆ.

[ಹೊರಗೆ ಹೋಗುವ ಬೂಟ್ಸಿನ ಸದ್ದು. ಝೀಪಿನ ಸೆಲ್ಫ್‌ಸ್ಟಾರ್ಟರಿನ ಸದ್ದು. ಇಂಜಿನ್ ನಡೆದು, ರಿವರ್ಸ್ ಮಾಡಿ ತಿರುಗಿಸುವ ಸದ್ದು.]

ಜಿತೇಂದ್ರ: ಅಜೀತ್! ಅಜೀತ್! (ಪಿಸುಮಾತಿನಲ್ಲಿ) ನಾನು ಈಗಲೆ ಹೊರಟುಹೋಗಬೇಕು. ಏನು ಆಪತ್ತೋ! (ಟ್ರೆಝುರಿ ತೆರೆದು) ಇದರಲ್ಲಿರುವ ನಗದಿ ೧೫ ಸಾವಿರ ರೂಪಾಯಿ ಸದ್ಯಕ್ಕೆ ಕೊಂಡುಹೋಗು. ಬಾಕಿ ಆ ಮೇಲೆ ಮಾತಾಡುವ. ಮಿಲಿಟರಿ ಎಕೌಂಟ್ ಆಫೀಸನ್ನು ಬೂದಿ ಮಾಡಿಸಿಬಿಡು! ನೋಡೋಣ ನಿನ್ನ ಪೌರುಷ!

ಅಜೀತ್: ನಾನೂ ಈಗಲೇ ಹೋಗಬೇಕು. ಸಾಥಿಗಳೆಲ್ಲಾ ಕಾದುಕೊಂಡಿರಬೇಕು. ಈ ಚಳವಳಿಕ್ಕೆ ಹೀಗೆಯೇ ಮುಕ್ತಹಸ್ತದಿಂದ ಸಹಾಯ ನೀಡು.

ಜಿತೇಂದ್ರ: ಹೋಗಿ ಬರುವೆ! ಪುನಃ ನಾಳೆ ರಾತ್ರೆ ಭೇಟಿ!

[ಹೊರಗೆ ಹೋಗುವ ಕಾಲ ಸಪ್ಪಳ, ಝೀಪ್ ಹೋಗುವ ಶಬ್ದ.]

೩

ಸುಧೀರ್ ಬಾಬುವಿನ ಶಾಂತಿ ಶಿಬಿರದಲ್ಲಿ ಅಜೀತ್ ಬಾಬುವಿನ ಧರ್ಮ ಪತ್ನಿ, ಸುಧೀರ್ ಬಾಬುವಿನ ಸೊಸೆ, ಶಿಬಿರದ ಸ್ವಯಂಸೇವಕರ "ಮಾತಾಜಿ" ಅಂಜಲೀದೇವಿ ಸಾಯಂಕಾಲದ ಪ್ರಾರ್ಥನೆಯಲ್ಲಿಯೇ ತಲ್ಲೀನಳಾಗಿದ್ದಾಳೆ.

ಪಥವನು ಬೆಳಗಿಸೆಲೈ ! ಪರೋಕ್ಷಾ
ಜ್ಯೋತಿ ದಯಾನಿಧಿಯೆ || ಪಲ್ಲ ||

ಪ್ರವಾಸ, ಹಾ! ಘನ ಘೋರಕರಿನ
ರಾತ್ರಿ ಭಯಾನಕ, ಗೃಹ ಅಜ್ಞಾತ,
ರವಿ ಪ್ರಕಾಶದೆ ಜಗದೊಳು ಮೆರೆದೆ
ಪ್ರಜ್ಞೆಯನುಳಿಯುತಲಿ, ಪರೋಕ್ಷ
ಜ್ಯೋತಿ ದಯಾನಿಧಿಯೇ !

ಮರೆಯಾಗಿರುವಾ ಸೂರ್ಯನು ಬಾರೆ
ಮಮ ಆತ್ಮಕೆ ನೀ ಸ್ಥಿರ ಧ್ರುವ ತಾರೆ!
ಸಮ್ಮತವೈ ! ಅಡಿಯೊಂದೇ ಮುಂದೆ
ಲೇಶ ಸಂದೇಹವಿನಾ ! ಪರೋಕ್ಷಾ
ಪಥವನು ಬೆಳಗಿಸೆಲೈ.

ರಘುಪತಿ ರಾಘವ ರಾಜಾರಾಮ ! ಪತಿತ ಪಾವನ ಸೀತಾರಾಮ !

[Ambulance ವಾಹನ ಮೊರೆಯುತ್ತ ಬರುವ ಸದ್ದು.]

ಗಾಯತ್ರಿ: ಏ! ಏ! ತಮ್ಮಾ! ಆ ದೀಪ ಹೊರಗೆ ತಾರೊ! ಎಂಬ್ಯೂಲೆನ್ಸ್ ವಾಹನ ಕಾಣೊ!

[ವಾಹನ ನಿಲ್ಲುವುದು. ಬಾಗಿಲು ತೆಗೆದು ಮಂದಿ ಕೆಳಕ್ಕಿಳಿಯುವ ಸದ್ದು.]

೧ನೆಯವ: ಮೆಲ್ಲಗೆ! ಮೆಲ್ಲಗೆ! ನಿಧಾನ ಎತ್ತಿಕೊಳ್ರೋ!

ಗಾಯತ್ರಿ: ಯಾರು! ಏನಾಗಿದೆ! ಅಯ್ಯೊಯ್ಯೊ!

೨ನೇಯವ: ಅಕ್ಕಾ! ಗಡಿಬಿಡಿ ಮಾಡಬೇಡಿ!

೧ನೇಯವ: (ಕೆಳಧ್ವನಿಯಲ್ಲಿ) ಗುಲ್ಲುಗದ್ದಲ ಮಾಡಬೇಡ್ರೊ!

ಗಾಯತ್ರಿ: ಯಾರಿಗೆ ಪೆಟ್ಟಾಗಿದೆ? ವಾಹನದಲ್ಲಿರುವವರು ಯಾರು?

೧ನೇಯವ: ಕಂದ ಕಿಶೋರ್!

ಅಂಜಲಿ: ತಮ್ಮಾ ಏನಾಯಿತು! ಏನಾಯಿತು!

ಗನೀಯುವ: ಧ್ವಜ ಹಿಡಕೊಂಡ ಕಿಶೋರ್ ಬಾಬು ಪೋಲೀಸರ ಕುದುರೆಗಳ ಕಾಲಡಿಗೆ ಬಿದ್ರು.

ಅಂಜಲಿ: ಹಾ! ಕಿಶೋರ್! ಕಂದಾ! ಏನಾಯಿತು! ಏನಾಯಿತು!

ಗನೀಯುವ: ಡಾಕ್ಟರ್ ಚೌಧುರಿಯುವರು ಎಲ್ಲಾ ಪರೀಕ್ಷಿಸಿ ಚಿಕಿತ್ಸೆ ಮಾಡಿದ್ದಾರೆ, ಮಾತಾಜೀ! ಗಾಬರಿಗೆ ಕಾರಣವೇ ಇಲ್ಲ.

ಗಾಯತ್ರಿ: ಕಂದ ಇನ್ನೂ ಸ್ಮೃತಿಗೆ ಬಂದಿಲ್ಲವಲ್ಲಾ!

ಗನೀಯುವ: ಕ್ಲೋರೊಫಾರ್ಮ ಕೊಟ್ಟಿಟ್ಟು ಮೂಳೆ ನೆಟ್ಟಗೆ ಮಾಡ್ಯಾರೀ ಡಾಕ್ಟರ್ರು! ಎಚ್ಚರಗಿಚ್ಚರ ಬರೋಕ್ಕೇ ಸ್ವಲ್ಪ ಸುಸ್ತೀಯುಂಟಕ್ಕಾ! ಲಗುನೇ ಆ ಮಂಚದ ಮ್ಯಾಗೆ ಹಾಸಿಗೆ ಹಾಕೀಂದ್ರೆ! ಎಂಬುಲೆನ್ಸ್ ವಾಹನ ಜಟ್ನೆ ಹೋಗ್ಬೇಕವ್ವಾ! ಪೆಟ್ಟಾದ ಮಂದಿ ರಗಡ್ ಇದ್ದಾರೆ.

[ಹಾಸಿಗೆ ಸಿದ್ಧಪಡಿಸಿ, ಕಿಶೋರನ್ನನ್ನೆತ್ತಿಕೊಂಡು ಮೆಲ್ಲಗೆ ನಡೆಯುವ ಕಾಲಸಪ್ಪಳ.]

ಗಾಯತ್ರಿ: ತಮ್ಮಾ! ಜೋರು ಜಖಂ ಆಗಿಲ್ಲವಷ್ಟೇ!

ಗನೀಯುವ: ಕಾಲಕೀಲು ತಪ್ಪಿದೆಯಂತೆ! ಬೆನ್ನಹುರಿ ಕಳಚಿರಲೂ ಬಹುದಂತೆ. ತಲೆಬುರುಡೆಗೆ ಕೊಂಚ ಬಿರುಕು.

ಗನೀಯುವ: ಮೈಕೈಯೆಲ್ಲಾ ಜಜ್ಜಿಹೋಗಿದೆ! ಆದ್ರೂಸೂ ಜೀವಕ್ಕೇನೂ ಅಪಾಯು ಇಲ್ಲಾಂತ ಡಾಕ್ಟರ್ ಹೇಳ್ತ್ಯಾರ್, ಮಾತಾಜೀ!

ಅಂಜಲಿ: ಕಿಶೋರನ ಪಿತಾಜೀ ಎಲ್ಲಿ?

ಗನೀಯುವ: ಗೊತ್ತಿಲ್ರೀ, ಮಾತಾಜೀ!

ಗಾಯತ್ರಿ: ಏನೇ? ಅಂಜಲಿ! ಉದ್ವ ಉಸಿರು! ಹೊನ್ನಿನಂಥ ಕಂದನನ್ನು ಕುದುರೆಗಳ ಕಾಲಡಿಗೆ ಹಾಕಿ ತಂದೆ ಪರಾರಿಯಾಗುವುದೇ?

ಅಂಜಲಿ: ಸರ್ದಾರ್ ದಿಲೀಪರೆಲ್ಲಿ?

ಗನೀಯುವ: ಅವರ ದಸ್ತಗಿರಿ ಆತು.

ಗಾಯತ್ರಿ: ಗುಂಡೂ ಹಾರಿಸಿದರಂತೆ!

ಗನೀಯುವ: ಹೌದಕ್ಕಾ! ಈ ಬಾರಿ ಇಕ್ಕಡೆಗಳಿಂದಲೂ, ಗುಂಡು! ಜನಸ್ತೋಮದ ಕಡೆಯಿಂದ ಹಾರಿದ ಗುಂಡುಗಳು ವಿಪರೀತ, ತಾಯಿ!

ಅಂಜಲಿ: ಗಾಯತ್ರಿ! ಇದೆಲ್ಲಾ, ಅವರ ನಿಗೂಢ ಕಾರ್‌ಬಾರ್.

ಗಾಯತ್ರಿ: ಯಾರದು! ಅಂಜಲಿ?

ಅಂಜಲಿ: ಕಿಶೋರನ ಪಿತಾಜಿದ್ದು.

[ಊಂ.......ಊಂ... ...ಹೂಂ: ಎಂದು ಕಿಶೋರ ನರಳುವ ಸದ್ದು.]

ಅಂಜಲಿ: ಕಂದಾ! ಕಿಶೋರ್! ನೋಡು! ನಾನು........ ..

ಕಿಶೋರ್: (ಉದ್ರೇಕಗೊಂಡು) "ಬೊಲೋ ಭಾರತ ಮಾತಾಕೀ ...........ಜೈ!"

ಅಂಜಲಿ: ಕಂದಾ! ಬಾಯಾರಿದೆಯಾ! ಇಗೋ, ಈ ಪಾನಕ ಕುಡಿ:

ಕಿಶೋರ್: ಅಮ್ಮಾ! ........ನಾ........ನೇ........ಲ್ಲಿ........ರು....ವೆ?

ಅಂಜಲಿ: ಮನೆಯಲ್ಲಿರುವೆ ಮಗು. "ಶಾಂತಿ ಶಿಬಿರದಲ್ಲಿ! ಇಗೋ ಪಾನಕ ಕುಡಿ.

ಕಿಶೋರ್: ಊಂ.....ಹೂಂ.....ಹಾಯ್ ...ಹಾಯ್....ಹಾಯ್!

೨ನೇಯುವ: ಮಾತಾಜೀ! ಎಚ್ಚರವಿದ್ದಾಗಲೆಲ್ಲಾ, ಮಗುವಿಗೆ ಘಂಟೆ ಘಂಟೆಗೂ ಎರಡೆರಡು ಗುಳಿಗೆ ಕೊಡಬೇಕೆಂದಿದ್ದಾರೆ ಡಾಕ್ಟರರು.

[ಕುದುರೆ ಗಾಡಿ ಬಂದು ಜನರು ಮೆಲ್ಲಗೆ ಇಳಿಯುವ ಸದ್ದು.]

೨ನೇಯುವ: ಯಾರೋ! ಆ ಗಾಡಿಲೀ....

ಸ್ವಯಂಸೇವಕರು (ಬಂದವರು): ನಾವೋಪ್ಪ! ನಾವು!

೨ನೇಯುವ: ಎಲ್ಲರಿಗೂ ಬ್ಯಾಂಡೆಜ್—ಗೀಂಡೆಂಜ್ ಆಯ್ತು?

ಸ್ವಯಂಸೇವಕರು: ಇಲ್ಲಪ್ಪಾ! ಇಲ್ಲಾ! ಇನ್ನೂ ಮಂದಿ ಇದ್ದಾರೆ. ನಮ್ದಾಯ್ತು. ಸಾಬೀ ಗಾಡಿ ಹಾಜರಿತ್ತು. ಬಂದ್ಬಿಟ್ವೀವು! ಸಾಬೀ! ತೆಗೋ! ನಿನ್ ಬಾಡಿಗೆ.

ಸಾಬಿ: ಬೇಡ್ರಿ ಬುದ್ಧಿ! ಏನೂ ಬೇಡ!

೧ನೇಯುವ: ಇಸ್ಕೊಳ್ಳೊ! ಸ್ವಲ್ಪ ಆದ್ರೂ ತೆಕ್ಕೊ! ನಿನ್ಗೆ ಊಟ ಮಾಡಬೇಡ್ವಾ! ಕುದ್ರೆಗೆ ಉಪಾಸ ಹಾಕ್ತೀಯಾ!

ಸಾಬಿ: ದೇಶ್ದಾಂಗ್ ಕೂಳಿದ್ದು ಉಪಾಸ್ರಿ, ಬುದ್ಧಿ! ಬಾಳಿದ್ದೂ ಸಾವು! ಊರೆಲ್ಲಾ ಬರಿದಾಯ್ತ್ರಿ. ಈ ಸೈತಾನ್ ಸರಕಾರ ಇರೋ ತನ್ಕ ಸುಖವೇ ಇಲ್ರಿ! ಎಲ್ಲಾ ದೋಚ್ಕೊಂಡು ಹೋಗ್ಬೈ ಬಿಟ್ರಿ! ಪಾಪದ ಮಂದಿ ಮೇಲೆ ಗುಂಡ ಹಾರ್ಸತಾರ್ರೀ ಮತ್ತೆ! ಮಂದಿ ಮೇಲೆ ಕುದುರೆ ಸವಾರಿ ಬಿಡ್ತಾರ್ರೀ ಆ ಹರಾಮ್ರು! ಊಟ ಬೇಡ! ಉಪ್ಚಾರ ಬೇಡ! ■ ಸರ್ಕಾರ

ಕಿತ್ಹೋಗೊ ತನ್ಕ ನಿವ್ಮ ಜತೇಲೇ ಇದ್ದುಬಿಡ್ತೀನೆ; ಬೇಕಾದ್ರೆ ಬಿದ್ದು ಸಾಯ್ತೀನ್ರಿ! ಈ ದಿನ ನನ್ಗೆ ಬಲು ಹಿಗ್ಗುರೀ. ಬುದ್ಧೀ!

ಗಾಯತ್ರಿ: ಸಾಬೀ! ನಿನ್ಗೆಕೋ ಹಿಗ್ಗು! ಭಾರೀ ಸವಾರಿ ಇತ್ತೇನೊ?

ಸಾಬಿ: ಅವ್ವಾ! ಈ ಬಾರಿ ನಮ್ಮ ಜನ ಹೆಡೆ ಎತ್ತಿದ ಹಾವಿನ್ಹಾಂಗ! ಪೆಟ್ಟಗೆ ಪೆಟ್ಟು! ಮುಯ್ಯಿಗೆ ಮುಯ್ಯಿ! ಗುಂಡಿಗೆ ಗುಂಡು! ಭೇಷ್!

ಗಾಯತ್ರಿ: ತಮ್ಮಂದಿರು! ನೀವೆಲ್ಲಾ ಪೆಟ್ಟಾದವರು. ಬೆಳಗ್ಗೆ ಮಾಡಿಟ್ಟ ಗಂಜಿ ಹಾಗೇ ಇದೆ ಬಿಸಿಮಾಡಲು ಇಟ್ಟು ಬಂದಿದ್ದೇನೆ. ಸ್ವಲ್ಪ ಸ್ವಲ್ಪ ಬಾಯಿಗೆ ಹಾಕಿಕೊಂಡು ಬಿಡಿ.

ಸಾಬಿ: ಬುದ್ಧಿ! ಎಲ್ರೂ ಹೋಗಿ! ನಾನಿಲ್ಲೇ ಕಾವಲಿರ್ತೀನ್ರಿ!

ಗಾಯತ್ರಿ: ಸಾಬಿ! ನಿನ್ಗೂ ಸ್ವಲ್ಪ ಗಂಜಿ ಇದೆ, ಕಾಣೊ!

ಸಾಬಿ: ನನ್ಗೆ! ಈವೊತ್ತು ಹೊಟ್ಟೆ ತುಂಬ್ಕೊಂಡಿದೆ, ಅವ್ವಾ! ನಮ್ಮ ಜನಾದ ಶಹಬಾಸ್‌ಗಿರಿ ನೋಡಿ ನನಗೆ.......(ಡರಕ್, ಡರಕ್)........ತೇಗು ಬರ್ತೈತೆ; ತಾಯಿ, ನಮ್ಜನಾ ಈ ಮುಂಚೆಯೇ ಹೀಂಗ್‌ಮಾಡಿದ್ರೆ ಬಿಳಿಯರ ಸರ್ಕಾರ ಯಾವಾಗ್ಲೊ ಓಡಿಹೋಗ್ತಿತ್ತು.

ಅಂಜಲಿ: ಹಾಗೆಲ್ಲ ಏನಾಯಿತೋ ಈಹೊತ್ತು!

ಸಾಬಿ: ಇಂದು ಊರೆಲ್ಲ ಲಂಕಾಪಟ್ಣ! ಪೊಲೀಸ್ ಠಾಣೆಗಳೆಲ್ಲಾ ಭಸ್ಮ! ತಂತೀಕಂಬಗಳು ಕಿತ್ಹೊಗೆದು ಬಿಟ್ಟಿದ್ದಾರೆ! ಪೊಲೀಸ್ರನ್ನೇ ಕೈದು ಮಾಡಿಬಿಟ್ಟ್ಯರ್ರಿ! ದೊಡ್ಡ ಧಣಿಯರು ಊರಾಗಿಲ್ವೇ!

ಗಾಯತ್ರಿ: ಅವರಿನ್ನೂ ಬೊಂಬಾಯಿಯಿಂದ ಮರಳಲಿಲ್ಲ.

ಅಂಜಲಿ: ಸಾಬಿ! ಸಣ್ಣ ಧನಿಯವರನ್ನು ಕಂಡಿದ್ದಿಯಾ!

ಸಾಬಿ: ಅವರ ಕಾರು ಇಂದು ಜನ ತುಂಬ್ಕೊಂಡು ಬಿರುಗಾಳಿಯಂತೆ ಊರೆಲ್ಲಾ ಓಡಾಡ್ತಿತ್ತವ್ವಾ! ಈಗ ಸಂಜೆಗೆ ಎಂಟು ಹತ್ತು ಮಂದಿ ಕುಳಿತ್ಕೊಂಡು ಧನಿಯವರೇ ಕಾರು ಬಿಡೋದನ್ನು ನಾಕಂಡೆ.

ಅಂಜಲಿ: ಜಗದಂಬೆ! ಅವರನ್ನು ಕಾಪಾಡುವ ಭಾರ ನಿನ್ನದು.

ಸ್ವಯಂಸೇವಕ: ಅಜಿತ್‌ಬಾಬು ಸುಖನಿವಾಸದ ಜಿತೇಂದ್ರರಿಗೂ ಮಂಕುಬೂದಿ ಎರಚಿದ್ದಾರಂತೆ!

ಸಾಬಿ: ಆಗಿಹೋಯ್ತು ಬಿಡಿ! ಜಿತೇಂದ್ರ ದೊಡ್ಡ ಘಾಟಿ ಕಾಣ್ರೀ! ಆತ ದಂಗೆಗೆ ಸೇರೋದೆ?

ಸ್ವಯಂಸೇವಕ: ಚೆನ್ನಾಗಿ ಹೇಳಿದೆ ಸಾಬಿ! ಈ ಜಿತೇಂದ್ರ ಅಲ್ಲದಿದ್ದರೆ ನಮ್ಮ ಹಳ್ಳಿ ಹಳ್ಳಿಗಳಲ್ಲಿದ್ದ ದವಸಧಾನ್ಯಗಳ ಕಣಜ ಬರಿದಾಗುತ್ತಿರಲಿಲ್ಲ. ದುಡ್ಡಿನ ಆಸೆಗೆ ಮೂರ್ಖ ಮುಂದಿ ಹಿಂದುಮುಂದೆ ನೋಡದೆ ಸೈರಿಗೆ ಬೀಜ ಕೂಡಾ ಬಾಕಿ ಇಡದೆ ಎಲ್ಲವನ್ನೂ ಮಾರಿಯೇ ಬಿಟ್ಟಿದ್ದಾರೆ.

೩ನೇಯುವ: ಜಿತೇಂದ್ರನ ಕಾರಭಾರಿನಿಂದ ಹಳ್ಳಿಯ ಹೊಂತಗಾರರೆಲ್ಲ ಸೈನ್ಯಕ್ಕೆ ಸೇರಿಯೂ ಆಯ್ತು.

೨ನೇಯುವ: ಆಜಿತೇಂದ್ರ ಶುದ್ಧ ದೇಶದ್ರೋಹಿ! ಸಮಾಜದ್ರೋಹಿ!

ಅಂಜಲಿ: ಅವರು ಇದನ್ನೆಲ್ಲಾ ಬಲ್ಲರು! ಅವನ ಐಶ್ವರ್ಯ, ವರ್ಚಸ್ಸುಗಳನ್ನು ಈ ಹೋರಾಟಕ್ಕೆ ಒಗ್ಗಿಸಿ,, ಬಗ್ಗಿಸಿಕೊಳ್ಳಬೇಕೆಂದೇ ಅವರು ಕನಸುಕಟ್ಟುತ್ತಿದ್ದರು.

ಸಾಬಿ: ಏನೋ ಕಾಯಿ! ಜಿತೇಂದ್ರ ಬಾಬು ಇಬ್ಬಾಯಿ ಹಾವು! ನಂಬೋದು ಕಷ್ಟ!

ಗಾಯತ್ರಿ: ರಾತ್ರಿ ಬಹಳ ಆಯಿತ್ರೋ! ಬೇಕೊ ಬೇಡಾಂತ ಒಂದೀಟು ಗಂಜಿ ಬಾಯಿಗೆ ಹಾಕೊಳ್ಳಿ! (ಎಲ್ಲರೂ ಹೋಗಿ ಎಲ್ಲ ನಿಶ್ಶಬ್ದ!)

[ಹಿಮ್ಮೇಳ ವಾದ್ಯಸಂಗೀತವು ಭೂಪಾಳಿ ರಾಗವನ್ನು ಸೌಮ್ಯವಾಗಿ ನಿರೂಪಿಸುವುದು. ಒಮ್ಮೊಮ್ಮೆ ಹಠಾತ್ತಾಗಿ ಅಪಸ್ವರಗಳು ಕೇಳಿಬರುವುವು. ಆರಾಮವಾಗಿ ನಿದ್ರಿಸುವ ಕಿಶೋರನು ಅರೆಮಬ್ಬಿನಲ್ಲಿ ತಡಪಡಿಸಿ,ಘರ್ಜಿಸುವನು.]

ಕಿಶೋರ್: 'ಝಂಡಾ ಉಂಚಾ ರಹೇ ಹಮಾರಾ!', 'ಭಾರತ ಮಾತಾಕೀ ಜೈ.' [ತಬ್ಬಿಬ್ಬಾಗಿ ಎದ್ದು ಓಡಿಬರುವ ಸದ್ದು.]

ಅಂಜಲಿ: ಕಂದ! ಕಿಶೋರ್! ಏನಿದು? ಸುಮ್ಮನಿರು ಮಗೂ!

ಕಿಶೋರ್: ಹಾರಿಸಿರೋ ಗುಂಡು! ನುಗ್ಗಿರೋ ಮುಂದು! ■ ಧೂರ್ತರನ್ನೆಲ್ಲಾ ಮುಗಿಸಿಬಿಡಿ ಕೊಂದು.

ಅಂಜಲಿ: ಮಗೂ! ಗುಡುಗುಡಿಸಬೇಡ! ನೆಮ್ಮದಿಯಿಂದಿರು.

ಕಿಶೋರ್; ಹೆದರಬೇಡೀ! ಅಂಜಬೇಡೀ! ಈ ಕೆಂಪುಕೋಟೆ ನಮ್ಮದು. ನಮ್ಮ ಭಾರತವಿಂದು ಸ್ವತಂತ್ರ. 'ಮೆರೆಯುತಿದೆ' ನಮ್ಮ ತ್ರಿವರ್ಣಧ್ವಜ!

ಅಂಜಲಿ: ಅಯ್ಯೊ! ರಕ್ತ ಸೂಸುತ್ತಿದೆ. ಗಾಯತ್ರಿ, ಬೇಗ ಬಾ!

[ಓಡಿಬರುವ ಸದ್ದು.]

ಗಾಯತ್ರಿ: ಏನಾಯಿತಮ್ಮಾ! ಏನಾಯಿತಮ್ಮಾ!

ಅಂಜಲಿ: ಸುವ್ವಿನಿರು ಕಂದಾ! ಕಿಶೋರ್! ಗಾಯತ್ರಿ, ಹಿಡಕೋ ಅವನ ಕಾಲನ್ನು; ಕೈಹಿಡಿದರೆ ಕಾಲನ್ನು ಒದೆಯುವ ಈ ಪೋರ! ನೆತ್ತರು ಸೂಸುತಿದೆ ನೋಡು!

ಕಿಶೋರ್: ಅಮ್ಮಾ! ಬಾಯಾರುತ್ತದೆ.

ಗಾಯತ್ರಿ: ತೆಗೋ! ಮಗೂ, ಈ ಪಾನಕ.

ಕಿಶೋರ್: ಮೈ ಉರಿಯುತ್ತಿದೆ.

ಅಂಜಲಿ: ಮೈ ಕೈ ಸವರಲೇ, ಕಂದಾ!

ಕಿಶೋರ್: ನರನಾಡಿಗಳೆಲ್ಲಾ ತುಡುಕುತ್ತಿವೆ ತಾಯಿ....ಜೈ—ಜೈ!

ಅಂಜಲಿ: ಇನ್ನೂ ಕೊಂಚ ಪಾನಕ ಕುಡಿ ಮಗೂ! ಸುಸ್ತಾಗು!

ಗಾಯತ್ರಿ: ಬಾಯಿತೆರೆ! ನುಂಗಿಬಿಡು ಈ ಗುಳಿಗೆ.

ಅಂಜಲಿ: ಕಂದಾ; ಕಿಶೋರ್! ಮಲಗಿನ್ನು ಮುದ್ದೇ! ಹೇ! ಜಗನ್ಮಾತೇ! ಭುವನೇಶ್ವರಿ! ನನ್ನ ಈ ಕಣ್ಮಣಿಯನ್ನು ಉಳಿಸಿಕೊಡು, ತಾಯೇ!

ಗಾಯತ್ರಿ: ಸಿಂಹದ ಮರಿ! ಕನಸಿನಲ್ಲಿಯೂ ಧ್ವಜದ ಮಾನ!

ಅಂಜಲಿ: ಹಸುಳೆ, ಏನೋ ಒಳ್ಳೇ ಸ್ವಪ್ನ ಕಂಡಿತು; ಗಾಯತ್ರಿ! ನನಗೇಕೋ ಒಂದು ಘೋರ ಕನಸು! ಅತಿಕಣ್ಮುಚ್ಚಿ ಮಂಚದ ಮಗ್ಗುಲಲ್ಲಿ ಕಾವಲು ಕುಳಿತ ನನಗೂ ಸ್ವಲ್ಪ ತೂಕಡಿಗೆ ಬಂದಿತ್ತು. ಆ ಕರಾಳ ಕನಸು! ಬಲು ಕೆಟ್ಟ ಕನಸು ಕಾಣೇ! ಅಬ್ಬಬ್ಬಾ!

ಗಾಯತ್ರಿ: ಇಂತಹ ಕಠೋರ ಪರಿಸ್ಥಿತಿಯಲ್ಲಿ ಸವಿಗನಸುಗಳೇ?

ಅಂಜಲಿ: ಹಾ! ಆ ಘೋರ ಕನಸು ಎಂತಹ ಸಂಭ್ರಾಂತಿಯದು! ನೋಡು! ಗಾಯತ್ರಿ! ನನ್ನ ಮೈರೋಮವೆಲ್ಲಾ ನಿಗುರಿಸಿಕೊಂಡಿದೆ. ಏನೇನೋ ಕಂಡೆ! ಎಲ್ಲವೂ ಅಲ್ಲೋಲಕಲ್ಲೋಲ! ಗಲನೇ ದಿನದ ಕುರುಕ್ಷೇತ್ರದಂತೆ ಭಯಂಕರವಾದ ಸಮರಭೂಮಿ. ದೃಷ್ಟಿಯುದ್ದಕ್ಕೂ ಕೆನ್ನೀರ ಮುನ್ನೀರೆ! ಮೇಲೆ ಕಾರ್ಮೋಡಗಳಿಂದ ನಿಬಿಡವಾದ ಆಕಾಶ. ಪಶ್ಚಿಮ ದಿಗಂತದ ಅಂಚಿನಲ್ಲಿ ನಸುಗೆಂಪಾಗಿ ಆರುತ್ತಿರುವ ಸೂರ್ಯ. ಅವನ ಹಿಂದೆಯೇ ಕಾಂತಿಹೀನನಾದ ಚಂದ್ರನೂ ಮುಳುಗಲು ಸಿದ್ಧ. ಇಂತಹ ಸಮರಭೂಮಿಯ ಒಂದೆಡೆಯಲ್ಲಿ ತಲೆಕೆಳಗೆ ಕಾಲು ಮೇಲೆ ಮಾಡಿ ತಡವರಿಸುವ ಒಂದು ವ್ಯಕ್ತಿ! ಎತ್ತೆತ್ತಲೂ ಹಬ್ಬಿರುವ ದುರ್ವಾಸನೆಯನ್ನು ನೀಗಲೋ ಎಂಬಂತೆ ಆ ವ್ಯಕ್ತಿ ಅರೆಹೊತ್ತಿನ ಹೂಗೆಬತ್ತಿಯೊಂದನ್ನು ಗಲ್ಲ ಉಬ್ಬಿಸಿ

ಸೇದುತಿತ್ತು. ಆ ವ್ಯಕ್ತಿಯೇ ಚರ್ಚಿಲ್! ಅಬ್ಬಬ್ಬಾ! ಅಷ್ಟರಲ್ಲಿ ಇಕ್ಕಡೆಗಳಿಂದಲೂ ಭಾರಿ ಆರ್ಭಟಿ ಕೇಳಿಸಿತು. ಆಕಾಶಮಾರ್ಗವಾಗಿ ಒಂದು ಹೆಗ್ಗಡುಗವನ್ನು ಏರಿಬರುತಿದ್ದ ಅರ್ಧಮೀಸೆಯ ಹಿಟ್ಲರ್! ಅವನನ್ನು ಇದಿರುಗೊಳ್ಳಲು ಘರ್ಜಿಸುತ್ತಾ, ಜನರಲ್ "ಟೋಜೋ" ಬರುತಿದ್ದ. ಟೋಜೋ ಬೆನ್ನೇರಿಬರುತಿದ್ದ ಒಂದು 'ಪೆಡಂಭೂತ' ಬಲು ಸೋಜಿಗದ್ದು. ಆ ಭೀಮಾಕಾರದ ಪೆಡಂಭೂತ ಒಮ್ಮೆ ಆಕಾಶದಲ್ಲಿ ಭಾರೀ ರೆಕ್ಕೆ ಬೀಸಿ ಹಾರುವುದು! ಇನ್ನೊಮ್ಮೆ ಮೊರೆಯುತ್ತಿರುವ ಸಾಗರದಲ್ಲಿ ಈಜುವುದು. ಆ ಮೇಲೆ ಘೀಳಿಡುತ್ತಾ ನೆಲದ ಮೇಲೆ ನೆಗೆನೆಗೆದು ಬರುತಿತ್ತು. ಇಬ್ಬರ ಮುಖದಲ್ಲಿಯೂ ರಾಕ್ಷಸೀ ನಗೆ! ಚರ್ಚಿಲರ ಮುಖದ ಮೇಲೆ ಮಸಣದ್ದೇ ಮುಸುಕು. ಏರು ಸ್ವರದಲ್ಲಿ ಕಿರುಚುತ್ತಲೂ ಗುಡಿಗುಡಿಸುತ್ತಲೂ ಭಯಂಕರ ವೇಗದಲ್ಲಿ ಬಂದೆಬಿಟ್ಟಿತು. ಒಂದು ವಿಚಿತ್ರ ಚಿತ್ರವಾಹನ. 'ಅಯ್ಯೋ ಅಯ್ಯೋ!' ಎಂದು ಚರ್ಚಿಲ್ಲರ ಮೊರೆ. ವಾಹನದಿಂದಿಳಿದರು ರೂಸ್ವೆಲ್ಟ್ ದೊರೆ. ದೂರದಿಂದ ಕೇಳಿಸುತಿತ್ತು ಸ್ಟಾಲಿನರ ಕರೆ. ಎಲ್ಲವೂ ಯದ್ವಾ ತದ್ವಾ!

ಗಾಯತ್ರಿ: ಲೋಕನಾಯಕರೆಂದು, ಶಾಂತಿಸ್ಥಾಪಕರೆಂದು ಒಣ ಬಡಾಯಿ ಕೊಚ್ಚುತ್ತಾ, ಸಾಮ್ರಾಜ್ಯ ಸರ್ವಾಧಿಕಾರಗಳನ್ನು ದುಷ್ಟ ಸ್ವಾರ್ಥಕ್ಕಾಗಿ ಸ್ಥಾಪಿಸುವ ಮಹತ್ವಾಕಾಂಕ್ಷೆಯಿಂದ ದೇಶವಿದೇಶಗಳ ಮಕ್ಕಳನ್ನು ಈ ಹತ್ಯಾಕಾಂಡದಲ್ಲಿ ಬಲಿಗೊಡಲು ಹೊರಟವರಿಗೆ ಒದಗುವುದು ಯದ್ವಾತದ್ವವಲ್ಲದೆ ಮತ್ತೇನು?

ಅಂಜಲಿ: ಗಾಯತ್ರಿ! ಕನಸಿನ ಕರಾಳ ಕೊನೆ ಇನ್ನೂ ಮುಟ್ಟಲಿಲ್ಲ. ಆ ಮೂರ್ಖರ ಪಾಡು ಅವರಿಗೆ ಬಿಡಬಹುದಿತ್ತು. ಆದರೆ ಅವರ ಸೊಕ್ಕಿಗೆ ನಮ್ಮವರ ರುಂಡಗಳು ದಂಡವೇ? ಮೈ ಜುಮ್ಮೆನ್ನಿಸುತ್ತಿದೆ. ನೋಡು! ನನ್ನ ಕೈಕಾಲ ನಡುಕ. ಈ ಕನಸು ಮುಂದೆ ಬರಲಿರುವ ಗಂಡಾಂತರಗಳನ್ನು ಸೂಚಿಸುವ ಅಪಶಕುನ. ಗಾಯತ್ರಿ! ಎನಗೆ ಬಹಳ ಭಯ!

ಗಾಯತ್ರಿ: ಹುರುಳಿಲ್ಲದ ಕನಸಿಗೆ ಅಂಜಿದರೆ ಹೇಗೆ? ಅಂಜಲಿ!

ಅಂಜಲಿ: ಆದಿಶಕ್ತಿ! ಭುವನೇಶ್ವರೀ! ನೀನೇ ದಯೆತೋರಬೇಕು.

ಗಾಯತ್ರಿ: ಅಂಜಲಿ! ನೀನು ಕಂಡ ಕನಸಿನ ಕೊನೆಯನ್ನು ಹೇಳು!

ಅಂಜಲಿ: ಸಮರಭೂಮಿಯ ಸಂದಿಗ್ಧ ಪರಿಸ್ಥಿತಿಯಲ್ಲಿ ಅನಿರೀಕ್ಷಿತವಾಗಿ ಒಂದು ವಿಸ್ಮಯಕಾರಕ ಬೃಹತ್‌ರಥ ನಡುವೆ ಬಂದು ನಿಂತಿತು.

ಮಿತ್ರಪಕ್ಷದ ವಿವಿಧ ರಾಷ್ಟ್ರಧ್ವಜಗಳು ಆ ರಥದ ಅಕ್ಕಪಕ್ಕಗಳಲ್ಲಿ ಜೋತಾಡಿಕೊಂಡಿದ್ದುವು. ದಾಸ್ಯಕೂಪದಲ್ಲಿ ಬಿದ್ದಿರುವ ದೇಶಗಳೆಲ್ಲವನ್ನು ಆ ಸೋಜಿಗ ರಥದ ಗಾಲಿಗಳಿಗೆ ಸಂಕಲೆಗಳಿಂದ ಬಿಗಿದಿದ್ದರು. ನಮ್ಮ ಭಾರತ, ಅತೀ ಮುಂದಿನ ಚಕ್ರದ ಎಡೆಯಲ್ಲೇ ತೊಳಲುತಿತ್ತು. ಬತ್ತಲೆ ಸುಲಿದ ಭಾರತಾಂಬೆಯ ಕೊರಗೇ! ಹಾಯ್! ಹಾಯ್!........(ಗಂಟಲು ಬೀಗುವುದು)

ದಿಕ್ಕು ಕಾಣದೆ ಕಂಗಾಲಾದ ಲೋಕದ ಜನರ ಅರಣ್ಯರೋದನ ಎಲ್ಲೆಡೆಗಳಿಂದಲೂ ಕೇಳಬರುತಿತ್ತು. ಇದೇನು? ಅದೇನು? ಎಂದು ನೋಡುವಷ್ಟರಲ್ಲಿ ಒಂದು ವೀರವಾಣಿ ಮೊಳಗಿಸಿ ಕೇಳಿಸಿತು. ಶಾಂತಿ ಮಂತ್ರದ ಮುಖ್ಯಾಚಾರ್ಯರಾದ ಮಹಾತ್ಮಾ ಗಾಂಧಿಯವರು—"ಲೋಕದ ಕಲ್ಯಾಣಕ್ಕಾಗಿ ಭಾರತ ಬಿಡುಗಡೆ ಮಾಡಿರಿ" ಎಂದು ಘೋಷಿಸುತ್ತ ಆ ರಥವನ್ನು ಅಪ್ಪಿಹಿಡಿದು ಅಟಕಾಯಿಸಲು ಹಿಂಬಾಲಿಸುತ್ತಿದರು. ಗಾಯತ್ರಿ! ಭಾರತಾಂಬೆಯ ವಿಮೋಚನೆ ಮಾಡದೆಬಿಡೆನೆಂದು ಪಡಿಬಲ ಕಟ್ಟಿಕೊಂಡು 'ಜೈ ಹಿಂದ್' ಎಂಬ ರಣಘೋಷವನ್ನು ಮೊಳಗಿಸಿ ಸುಭಾಷ ಬಾಬು ಆ ಭೀಮ ರಥವನ್ನು ಮುಲಿತು ನಿಲ್ಲುವರು. ಗಾಯತ್ರಿ! ವೀರರ ಆರ್ಭಟೆಗಳು! ತೋಪುಗಳ ಸಿಡಿಗುಂಡು! ಕೂರಸಿಗಳ ಝಣಝಣತ್ಕಾರ! "ಮಾಡು ಯಾ ಮಡಿ" ಎಂದೇ ಆರ್ಭಟಿಸುತ್ತಾ ನನ್ನ ಸೌಭಾಗ್ಯತಿಲಕ, (ಕಂಪಿಸುವ ಸ್ವರ) ಅಜಿತ್ ಬಾಬು—ಭಾರತದ ತ್ರಿವರ್ಣಧ್ವಜವನ್ನು ಹಾರಿಸುತ್ತಾ ಸಿಡುಕಿ ದುಡುಕಿ ಬಂದು ಆ ರಥವನ್ನು ಅಡ್ಡಕಟ್ಟಿದರು. ಯಂತ್ರದ ಬಲದಿಂದ ತಂತ್ರಜಾಲಗಳಿಂದ ನಡೆಯುವ ಆ ರಥವು ಮುಂದೆ ಸರಿಯಿತು. ಅಯ್ಯೋ! ಭಾರತಾಂಬೆಯನ್ನು ಬಿಗಿದಿದ್ದ ಚಕ್ರದ ಅಡಿಯಲ್ಲಿಯೇ ಅಜಿತ್ ಬಾಬು!........... (ನಿಟ್ಟುಸಿರು—ನಿಶ್ಶಬ್ದ) ಒಡನೆ ಆ ರಥ ಸ್ಫೋಟಿಸಿತು. ತುಣುಕು ತುಣುಕಾಗಿ ಎಲ್ಲೆಲ್ಲೋ ಚಲ್ಲಾಪಿಲ್ಲಿಯಾಯಿತು. ಆಗ ಭೂಮಿ ಬೆಂಕಿಯನ್ನೇ ಕಾರಿತು. ಆಕಾಶದಿಂದ ಉರಿಯೇ ಮಳೆಯಾಗಿ ಸುರಿಯಿತು.

ಗಾಯತ್ರಿ: ಅಂಜಲಿ! ಏಕೆ ವೃಥಾ ಈ ಕಣ್ಣೀರು? ಆ ಭುವನೇಶ್ವರಿ ನಮ್ಮನ್ನು ಕಾಪಾಡುವಳು. (ಪೋಲೀಸ್ ಲೋರಿಗಳು ಬರುವುವು.)

ಸುಪರಿಂಟೆಂಡೆಂಟರು: ಪಾಗಾರದ ಸುತ್ತಲೂ ಪಹರೆ ಇರಿಸಿರಿ. ಮನೆಯ ಪ್ರತಿಬಾಗಿಲಿಗೂ ಒಬ್ಬೊಬ್ಬ ಸಶಸ್ತ್ರ ಸಿಪಾಯಿಯನ್ನು ಕಾವಲಿಗಾಗಿ ನಿಲ್ಲಿಸಿರಿ. ನಾವು ಮನೆ ಜಪ್ತಿಮಾಡಿ ಬರುತ್ತೇವೆ. ಸಾರ್ಜೆಂಟ್, ಜೋಕೆ! ಸುತ್ತಲೂ ಎಚ್ಚರ!

ಸುಪರಿ.: ಯಾರು ಈ ಮನೆಯಲ್ಲಿ?

ಅಂಜಲಿ: ನಾನಿದ್ದೇನೆ.

ಸುಪರಿ.: ಹೆಸರೇನು?

ಅಂಜಲಿ: ಅಂಜಲೀ ದೇವಿ!

ಸುಪರಿ: ಗಂಡಸರಾರೂ ಇಲ್ಲವೇ?

ಅಂಜಲಿ: ಕೈಕಾಲು ಮುರಿದು ನರಳುತಿರುವ ಕಿಶೋರ್ ಇದ್ದಾನೆ. ಗಾಯಗೊಂಡ ಸ್ವಯಂಸೇವಕರೂ ಇದ್ದಾರೆ.

ಸುಪರಿ.: ಅಜಿತ್ ಬಾಬು ಎಲ್ಲಿ?

ಅಂಜಲಿ: ಗೊತ್ತಿಲ್ಲ!

ಸುಪರಿ: ಮನೆ ಜಡ್ತಿ ಮಾಡಬೇಕಾಗಿದೆ. ಆತಂಕವೇನೂ ಇಲ್ಲವಷ್ಟೆ? ಶಾಂತಿಭಂಗವಾಗಬಾರದು.

ಅಂಜಲಿ: ಶಾಂತಿಭಂಗ ಆಗುವುದಾದರೆ ನಿಮ್ಮ ಕಡೆಯವರಿಂದ.

ಸುಪರಿ: ಅಂಜಲೀದೇವಿ, ಈ ಮನೆ ಮಠಾರ ಎಲ್ಲಾ ಸರಕಾರಕ್ಕೆ ಸೇರಬೇಕೆಂದು ಆಜ್ಞೆಯಾಗಿದೆ. ಕೂಡಲೇ ವಶಪಡಿಸಿಕೊಳ್ಳಬೇಕೆಂದು ನನಗೆ ಬಂದ ಕಟ್ಟಾಜ್ಞೆ ಇದು. ಇಂದು ಸಾಯಂಕಾಲದೊಳಗೆ ನೀವೆಲ್ಲಾ ಇಲ್ಲಿಂದ ಹೊರಟುಹೋಗಬೇಕು.

ಗಾಯತ್ರಿ: ಯಮದೂತರ ದೊಡ್ಡ ಪಡೆಯೇ ಬಂದಿದೆಯಲ್ಲಾ! ಏನಾಗಬೇಕಂತೆ ಇವರಿಗೆ?

ಅಂಜಲಿ: ನಾವೆಲ್ಲ ಇಲ್ಲಿಂದ ತೊಲಗಿ ಹೋಗಬೇಕಂತೆ!

ಗಾಯತ್ರಿ: ಬಹಳ ಒಳ್ಳೆಯ ಯಮದೂತರಿವರು! ಪಾಶ ಬಿಗಿದು ಎಳಕೊಂಡು ಹೋಗುವವರಲ್ಲ. ಗಡಿಪಾರು ಮಾಡುವವರು.

ಅಂಜಲಿ: ಗಾಡೀವಾಲಾ! ಗಾಡೀವಾಲಾ!

ಸಾಬಿ: ಅವ್ವಾ! ಬಂದೇ, ಬಂದೇ!

ಅಂಜಲಿ: ಒಡನೆ ಹೋಗಿ ಜಿತೇಂದ್ರ ಸಾಬರಿಗೆ ಇಲ್ಲಿಯ ವಿಷಯ ತಿಳಿಸು. ಬೇಗನೇ ಬಾ. ನಮ್ಮ ಗಂಟುಮೂಟೆ ಹೊರಲಿಕ್ಕಿದೆ ನಿನಗೆ.

ಸುಪರಿ: ಬರೀ ದೈನಂದಿನದ ಅಗತ್ಯಗಳಿಗೆ ಬೇಕಾದುದನ್ನು ಮಾತ್ರ ನೀವು ಒಯ್ಯಬಹುದು. ಇನ್ಸ್‌ಪೆಕ್ಟರ್! ಹಾಸಿಗೆ, ದಿಂಬು, ಚಂಬು, ಚೆರಿಗೆ ಇವನ್ನು ಮಾತ್ರ ಬಿಟ್ಟು ಬಾಕಿ ಎಲ್ಲಾ ಸಾಮಾನುಗಳ ಒಂದು

ಯಾದಾಸ್ತು ತಯಾರಿಸಿರಿ. ಈ ದೇವಿಯವರು ಹೊರಟು ಹೋಗುವ ಮುಂಚೆ ಅದರ ಸಹಿ ಪಡಕೊಳ್ಳಬೇಕು.

ಜಿತೇಂದ್ರ: (ಬಂದು) ಅಂಜಲಿದೇವಿಯವರೆಲ್ಲಿ?

ಅಂಜಲಿ: ಜಿತೇಂದ್ರ ಬಾಬು—ನಾವೆಲ್ಲಾ ಇಲ್ಲಿಂದ ಹೊರಡಲೇಬೇಕಾಗಿದೆ. ಕಿಶೋರನನ್ನು ಕರಕೊಂಡು ನಮ್ಮ ಹಳ್ಳಿಗೆ ಹೋಗುವೆವು.

ಜಿತೇಂದ್ರ: ನನ್ನಿಂದೇನಾಗಬೇಕು, ತಿಳಿಸಿಬಿಡಿ.

ಅಂಜಲಿ: ದಯವಿಟ್ಟು ನಿಮ್ಮ ಆ ದೊಡ್ಡ ಕಾರು ಒದಗಿಸುವಿರಾ?

ಗಾಯತ್ರಿ: ಛೇ! ಛೇ! ಅಂಜಲಿ, ನೀನು ತುಂಬಿದ ಬಸುರಿ. ಅಷ್ಟು ಉದ್ದದ ಪಯಣ! ಅಸೌಖ್ಯದ ಕಿಶೋರನನ್ನಾದರೂ ಕೊಂಡುಹೋಗುವುದು ಹೇಗೆ?

ಅಂಜಲಿ: ಆಗಬಾರದೆಲ್ಲಾ ಆಗುವಾಗ ಸಹಿಸಲಾಗದ ಕಷ್ಟದುಃಖಗಳನ್ನು ಅನುಭವಿಸಿಯೇ ಸಿದ್ಧವಲ್ಲವೇ? ಗಾಯತ್ರಿ!

ಜಿತೇಂದ್ರ: ಅಂಜಲೀ ದೇವಿ! ನೀವು ಆ ಕಾಡಗೊಂಪೆಗೆ ಏಕೆ ಹೋಗಬೇಕು? ಅಲ್ಲದೆ ಈಗ ಅಲ್ಲಿಯೇ ಸಮೀಪ ಪರದೇಶೀ ಸೈನಿಕರ ದೊಡ್ಡ ಠಾಣೆಯೇ ಏರ್ಪಟ್ಟಿದೆ.

ಅಂಜಲಿ: ಬೇರೆ ಯೋಚನೆಯೇ ಬೇಡ. ಅಲ್ಲಿಗೆ ಇಂದೇ ಹೋಗುವುದು ನಿಶ್ಚಯ.

ಜಿತೇಂದ್ರ: ಅಜಿತ್ ಬಾಬುವನ್ನು ಕೇಳಬೇಡವೇ?

ಅಂಜಲಿ: ಅಗತ್ಯವಿಲ್ಲ. ಕಾಲಬಂದಂತೆ ಕೋಲಕಟ್ಟಲು ಅವರ ಅನುಮತಿ ಇದ್ದೇ ಇದೆ.

ಜಿತೇಂದ್ರ: ನಿಮ್ಮ ನಿರ್ಧಾರವನ್ನು ಮಾರ್ಪಡಿಸಲು ಅಸಾಧ್ಯವೆಂದಾದರೆ ಒಂದು ಎಂಬ್ಯೂಲೆನ್ಸ್ ವೇನನ್ನೇ ಕಳುಹಿಸುತ್ತೇನೆ. ನಿಮ್ಮ ಪ್ರಯಾಣ ಸುಗಮವಾಗಲಿ.

೪

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬಹಳ ಬಲಿದಾನವಾಯ್ತು. ಎಷ್ಟೋ ಕುಟುಂಬಗಳು ಆ ದಾವಾಗ್ನಿಯಲ್ಲಿ ಬೆಂದುಹೋದುವು. ಎರಡನೇ ಮಹಾ ಯುದ್ಧದ ಕರಿನೆರಳು ಭಾರತದ ಮೇಲೂ ಕವಿಯಿತು. ಯುದ್ಧ

ಸನ್ನಾಹದಿಂದಾಗಿ ದೇಶದಲ್ಲೆಲ್ಲಾ ಬೇನೆ ಬರಗಳು ವ್ಯಾಪಿಸಿಕೊಂಡುವು. ಅನ್ನಕ್ಕಾಗಿ ಡೊಂಬಿಗಳು ಆಗಿ ಹೋದುವು. ಎಲ್ಲೆಲ್ಲೂ ಸಾವು ನೋವು ಗಳ ತಾಂಡವ! ಸೂರ್ಯಚಂದ್ರರಿಬ್ಬರನ್ನು ಬಿಟ್ಟರೆ, ಭಾರತದ ಪಾಲಿಗೆ ಉಳಿದುವೆಂದರೆ ಅಂಜಲೀದೇವಿಯಂತವರ ಉಜ್ವಲ ಆತ್ಮ ಅಭಿಮಾನ! ಉತ್ಕಟ ಸ್ವಾತಂತ್ರ್ಯಪ್ರೇಮ! ಅಚಲ ನಿಶ್ಚಯ! ಅಸಾಮಾನ್ಯ ಸ್ಥೈರಣೆ!

ಗಾಯತ್ರಿ: ಅಮ್ಮಾ ಅಂಜಲಿ! ಇನ್ನೆಷ್ಟು ಕಾಲ ಈ ಅಜ್ಞಾತವಾಸ? ವರುಷಗಳೆರಡು ಕಳೆದವು. ಇದು ಒಂದು ಬಾಳೇ?

ಅಂಜಲಿ: ಬಿಡುಗಡೆ ಇಲ್ಲದ ಬಾಳು ಬಾಳಲ್ಲ, ಗಾಯತ್ರಿ! ಕಡು ಗೋಳು! ಆದರೆ ಪವಿತ್ರ ಸ್ವಾತಂತ್ರ್ಯ ಚಿಲ್ಲರೆಯಲ್ಲಿ ಸಿಕ್ಕುವುದೇ?

ಗಾಯತ್ರಿ: ಚಿಲ್ಲರೆಯೋ? ಪಿಲ್ಲರೆಯೋ? ಯುದ್ಧದ ಸರಬರಾಯಿ ಗೆಂದು ಊರು ಕಾಡುಗಳೆಲ್ಲಾ ಎಂದೋ ಬರಿದಾಗಿ ಹೋಗಿವೆ. ಅನ್ನ ಅನ್ನವೆಂದು ಜನತೆ ಗೋಳು ಇಡುತ್ತಿದೆ. ಸೇರು ಸೇರು ಹೊನ್ನಿತ್ತರೂ ಒಂದು ಹಿಡಿ ಅಕ್ಕಿ ಸಿಕ್ಕುವಂತಿಲ್ಲ. ಹೇಗೆ ದಿನ ಕಳೆಯಬೇಕೋ!

ಗಾಯತ್ರಿ: ಅಂಜಲೀ! ಆ ಮುದ್ದನ್ನು ಅಳಗೊಳಿಸಬೇಡ, ಮೊಲೆ ಯೂಡಿಸು!

ಅಂಜಲಿ: ಬತ್ತಿಹೋದ ಮೊಲೆಯಿಂದ ಏನು ಹೊಟ್ಟೆ ತುಂಬೀತು!

ಕಿಶೋರ್: ಅಮ್ಮಾ! ಹಸಿವಾಗುತ್ತಿದೆ. ಹಸಿವು, ಭಾರೀಹಸಿವು!

ಗಾಯತ್ರಿ: ನಿನ್ನೆ ಮಿಲಿಟರಿ ಸಿಪಾಯಿಗಳು ಬಿಸಾಡಿದ ಎರಡು ಬಿಲ್ಲೆ ಬಿಸ್ಕೇಟು ಅವನಿಗೇ ಕೊಟ್ಟಿದ್ದೆ. ತಿನ್ನಲು ಇನ್ನೇನು ಇಲ್ಲವಲ್ಲಾ!

ಅಂಜಲಿ: ಕಂದಾ! ಕಿಶೋರ್! ಈಗ ಕೊಂಚ ನೀರು ಕುಡಿ. ಆ ಮೇಲೆ ಏನಾದರೂ ತಿಂಡಿಕೊಡುವೆ.

ಕಿಶೋರ್: ನೀರು ಕುಡಿದರೆ ಇನ್ನಷ್ಟು ತ್ರಾಸ ಆಗುತ್ತದಮ್ಮಾ! ಛೇ—ನನ್ನ ಈ ಕೈಕಾಲುಗಳು ಗಟ್ಟಿಮುಟ್ಟಾಗಿದ್ದರೆ ಎಲ್ಲಿಂದಾದರೂ ಆಹಾರ ತರಬಹುದಿತ್ತು.

ಗಾಯತ್ರಿ: ಕೈಕಾಲು ಸರಿ ಇದ್ದು ಗಟ್ಟಿಮುಟ್ಟಾಗಿದ್ದರೂ ಆಹಾರ ಸಿಗಬೇಕಾದರೆ ಇಂದು ಒಂದೇ ದಾರಿ, ಕಿಶೋರ್!

ಕಿಶೋರ್: ಗಾಯತ್ರಿ! ಅದಾವ ದಾರಿ?

ಗಾಯತ್ರಿ: ಸೈನ್ಯಕ್ಕೆ ಸೇರುವುದೇ ಆ ದಾರಿ!

ಕಿಶೋರ್: ಗಾಯತ್ರಿ! ನೇತಾಜಿಯವರ "ಅಜಾದ್ ಹಿಂದೀ ಸೈನ್ಯ" ಕ್ಕಲ್ಲವೇ? ಅವರು ನನ್ನನ್ನು ನಿಶ್ಚಯವಾಗಿಯೂ ಸೇರಿಸಿಕೊಳ್ಳುವರು.

ಅಂಜಲಿ: ಅದು ಇನ್ನೂ ಭಾರತಕ್ಕೆ ಬಂದಿಲ್ಲ, ಕಂದ! ಈಗ ಇಲ್ಲಿ ಇರುವುದು ಬ್ರಿಟಿಷರ ಮಿಲಿಟರಿ.

ಕಿಶೋರ್: ಧಿಕ್ಕಾರ! ಧಿಕ್ಕಾರ! ಬ್ರಿಟಿಷರೇ ತೊಲಗಿ ಭಾರತದಿಂದ! ತೊಲಗಿ ಭಾರತದಿಂದ! (ಸ್ತಬ್ಧ)

ಕಿಶೋರ್: ಅಯ್ಯೋ! ಹ............ಸಿ............ವು........ಸತ್ತೇ ............ಗಾ.... .......ಯ...........ತ್ರೀ!

[ಮಿಲಿಟರಿ ಲೋರಿ ಬರುತ್ತ ಹತ್ತಿರಕ್ಕೆ ಬಂದಂತೆ ವೇಗ ಮೆಲ್ಲಗಾಗಿ ವಿಶೇಷ "ಹೊರ್ನ" ಕೇಳಿಸುವುದು.]

ಗಾಯತ್ರಿ: ಅಂಜಲಿ! ಈಗ ಬರುತ್ತೇನೆ.

[ಬಾಗಿಲು ತೆರೆದು ಹೊರಕ್ಕೆ ಹೋಗುವ ಕಾಲ ಸಪ್ಪಳ. ಸೈನಿಕರ ಗುಜುಗುಜು.]

೧ನೇ ಸಿಪಾಯಿ: ಹಕ್ಕಿ ಬಲೆಗೆ ಬೀಳದು ಕಾಣೊ.

೨ನೇ ಸಿಪಾಯಿ: ನೋಡೋ ಬಾಗಿಲು ತೆರೆದು ಹೊರಗೆ ಓಡಿ ಬರ್‍ತೈತೆ.

ಗಾಯತ್ರಿ: ಬಿಸ್ಕೀಟು ಇದ್ದರೆ ಕೊಡಿರಿ. ಹಾಲಿನ ಡಬ್ಬಿ ಒಂದನ್ನು ದಯಪಾಲಿಸುವಿರಾ?

೨ನೇ ಸಿಪಾಯಿ: ಬರೇ ಒಂದು ಪೆಕೇಟ್ ಸಿಗರೇಟಿಗಾಗಿ ಈ ಲೋರಿ ಪೇಟೆಗೆ ಹೋದದ್ದು. ಹಾಲುಗೀಲು ಠಾಣೆಯಲ್ಲಿ ಧಾರಾಳ ಇದೆ.

ಗಾಯತ್ರಿ: ಅಣ್ಣಾ! ದಯಮಾಡಿ ತಂದುಕೊಡುವಿಯಾ? ಎರಡು ಮಕ್ಕಳನ್ನು ಉಳಿಸಿದ ಪುಣ್ಯ ನಿನಗೆ ಬರುವುದು.

೧ನೇ ಸಿಪಾಯಿ: ಮಿಲಿಟರಿ ಶಿಸ್ತು. ನಮಗೆ ಹಾಗೆಲ್ಲಾ ಅಡ್ಡಾಡ ಬಿಡುವುದಿಲ್ಲ. ಠಾಣೆ ಕಡೆಗೆ ನೀನೆ ಬಂದರೆ ಕೊಡಬಹುದು.

೨ನೇ ಸಿಪಾಯಿ: ಬರುವೆಯಾದರೆ ಲಾರಿ ಏರಿಬಿಡು.

[ಲಾರಿಯ ಮೇಲೆ ಏರುವ ಸದ್ದು. ಲಾರಿ ಮೊರೆಯುತ್ತ ಜೋರಾಗಿ ಮುಂದೆ ಓಡುವುದು]

ಕಿಶೋರ್: ಅಮ್ಮಾ....! ಪ್ರಾಣಸಂಕಟ....! ಅಯ್ಯೋ! ಅಯ್ಯೋ!

ಅಂಜಲಿ: ಗಾಯತ್ರಿ ತಿಂಡಿ ತರುತ್ತಾಳೆ. ಈಗ ಸ್ವಲ್ಪ ನೀರು ಕುಡಿ,

[ಚಿಕ್ಕ ಕೂಸು ಕಿರುಚಿ ಕಿರುಚಿ ಅಳುವ ಸದ್ದು. ಸಮಾಧಾನಪಡಿಸಲಾಗುವುದಿಲ್ಲ]

ಕಿಶೋರ್: ಅಮ್ಮಾ! ಕೂಸು ಏಕೆ ಹಾಗೆ ಕೈಕಾಲು ಹೊಡೆಯುತ್ತಿದೆ?

ಅಂಜಲಿ: ಅಯ್ಯೋ! ಅಯ್ಯೋ! ಇದೆಂಥ ವಿಕಾರ!

[ಕೂಸಿನ ಕೂಗು ಅಸ್ಪಷ್ಟವಾಗುತ್ತದೆ. ಗಂಟಲಲ್ಲಿ ಗೊರಗೊರ ಸದ್ದು.]

ಅಂಜಲಿ: ಅಯ್ಯೊಯ್ಯೊ! ಕೈಕಾಲುಗಳೆಲ್ಲಾ ತಣ್ಣಗಾದುವಲ್ಲಾ! ಗಾಯತ್ರಿ! ಗಾಯತ್ರಿ! ಎಲ್ಲಿ ಹೋದಳಿವಳು? ಗಂಟೆ ಎರಡು ಕಳೆಯಿತು.

[ಗಂಟಲೊಳಗಿನ ಸದ್ದು ಒಮ್ಮೆಗೆ ನಿಂತು ಬಿಡುವುದು]

ಅಂಜಲಿ: ಶಿವ........ಶಿ... ವಾ....! ನೀನಿತ್ತುದನ್ನು ನೀನೆ ಕಸಿದು ಕೊಂಡೆಯಾ....ಹಾ....ನನ್ನ....ಮು....ತ್ತೇ! (ಅಳುವಳು)

[ಬಾಗಿಲು ತೆರೆದು ಒಳಕ್ಕೆ ಬರುವ ಕಾಲ ಸಪ್ಪಳ.]

ಕಿಶೋರ್: ಅಮ್ಮಾ!....ನನ್ನನ್ನು ಬಿಟ್ಟು ಹೋಗಬೇಡಮ್ಮಾ!

ಗಾಯತ್ರಿ: ಏನೇ ಅಂಜಲಿ! ಏನಾಯ್ತು!

[ಒಳಗಿಂದ ಕಿಶೋರನು ನರಳುವ ಸದ್ದು. ಅಂಜಲಿಗೆ ದುಃಖವುಕ್ಕುತ್ತಿದೆ.]

ಅಂಜಲಿ: ಹೇ! ಭುವನೇಶ್ವರ! ಹೇ! ಜಗದಂಬೆ!

ಗಾಯತ್ರಿ: ಅಮ್ಮಾ! ಅಂಜಲಿ, ಸಹಿಸಬೇಕು. ಜಯಿಸಬೇಕು! ಸೈರಿಸಿಕೋ ಅಂಜಲಿ! ಇದೋ ಬಿಸ್ಕೀಟ ! ಹಾಲಿನ ಡಬ್ಬಿಯೂ ಇದೆ. ಕಿಶೋರನಿಗೆ ಹಾಲು ಕಾಸಿಕೊಡು. ಬಾಡಿಬಿದ್ದ ಈ ಮೊಗ್ಗೆಯ ಅಂತ್ಯಸಂಸ್ಕಾರ ನಾನೇ ಮಾಡಿಬರುತ್ತೇನೆ.

[ಅಂಜಲಿ ಒಳಗೆ ಹೋಗುವ ಕಾಲ ಸಪ್ಪಳ]

ಗಾಯತ್ರಿ: ಹೇ–"ಭಾರತ ಭಾಗ್ಯವಿಧಾತಾ," ನೀನೆಷ್ಟು ಕಠೋರನೋ!

ಅಂಜಲಿ: (ಚೀರುವಳು) ಕಿ....ಶೋ....ರ್, ಕಿಶೋರ್, ಕಿ....ಶೋ....ರ್, ಹಾ! ಕಂದ ಕಿಶೋರ್! ಈ ನನ್ನ ಕಣ್ಮಣಿಯು ಸಿಡಿದುಹೋಯ್ತೇ?

[ಸ್ಮೃತಿತಪ್ಪಿ ನೆಲಕ್ಕೆ ದೊಪ್ಪನೆ ಬಿದ್ದ ಸದ್ದು, ಹಿಮ್ಮೇಳದಲ್ಲಿ ಕರುಣಾಜನಕವಾದ ವಾದ್ಯ ಸಂಗೀತ ಕೇಳಿಸುವುದು.]

೬

ಹೆತ್ತ ಕರುಳಿನ ಬೇಗುದಿಯನ್ನು ಸಹಿಸಿ, ಅಂಜಲೀದೇವಿ ಚಾತಕ ಹಕ್ಕಿಯು ಮಳೆಹನಿಗೆ ಬಾಯಿಬಿಡುವಂತೆ ದೇಶದ ಸ್ವಾತಂತ್ರ್ಯದ ಹಾಗೂ ಸ್ವಾತಂತ್ರ್ಯಸಮರದ ನಾಯಕನಾದ ತನ್ನ ಪತಿದೇವನ ಪುನರಾಗಮದ ನಿರೀಕ್ಷೆಯಲ್ಲಿಯೇ ಬರಗಾಲದಿಂದ ಬೆಂಗಾಡಾದ ಬಂಗಾಲದಲ್ಲಿ ದಿನನೂಕುತಿದ್ದಳು. ಜಾಡ್ಯಹಿಡಿದು ಹಾಸಿಗೆಯಲ್ಲಿ ಬಿದ್ದ ಗಾಯತ್ರಿಗೆ ಪ್ರಾಣಾಂತಿಕ:

[ಹಿಮ್ಮೇಳದವರು ಪದಹಾಡುವರು]

### ಪದ

[ಧಾಟಿ:—ರುಂ ಜುಂ ಬರಸೆ ಬಾದಲವಾ—ಎಂಬಂತೆ.]

ಜಣ ಜಣ ಗೆಜ್ಜೆ ಮೊಳಗಿಸಿ ಬಾ। ಮುಕ್ತಿಯ ತಾರೆ, ತಾರೆ,

ಸ್ವಾತಂತ್ರ್ಯ ದೇವೀ ದೇವಿ! ಸ್ವಾತಂತ್ರ್ಯ ದೇವಿ!
ಘೋರ ದಾಸ್ಯ ಶಾಪಕೆ ಕನಿಕರ ತೋರಿಸೆ, ತೋರಿಸೆ,
ಭಾರತ ದೇಶದ ವಿಪತ್ತ ಪಡೆ ಹೊಡೆದೋಡಿಸೆ, ಓಡಿಸೆ
ಸೈರಣೆಕ ಕೈ ಮೀರಿಹುದೈ; ಜನಕಾಗಿ, ಜಗಕಾಗಿ
ಮುಕ್ತಿಯ ತಾರೆ, ಬಾರೆ, ಮುಕ್ತಿಯ ತಾಯೇ!
............ಜಣ ಜಣ ಗೆಜ್ಜೆ............

[ಹಿಮ್ಮೇಳದ ವಾದ್ಯ ಸಂಗೀತ ಮೊರೆಯುತ್ತಿರುವಂತೆ ಅಂತ್ಯವಾಗುವುದು.]

ಗಾಯತ್ರಿ: ಅಯ್ಯೋ! ಅಯ್ಯಯ್ಯೋ!........

[ಬಹಳವಾಗಿ ಬಗೆಬಗೆಯಲ್ಲಿ ನರಳುವ ಸದ್ದು.]

ಅಂಜಲಿ: ಶೂಲೆ ಬಹಳವೇ ಗಾಯತ್ರೀ?

ಗಾಯತ್ರಿ: (ಬಹಳ ಕ್ಷೀಣಸ್ವರದಲ್ಲಿ) ಕೀಲು ಗಂಟಲುಗಳೆಲ್ಲಾ........ ಬಹಳ .......ಊದಿ........ಹೋಗಿವೆ. ಅಂಜಲಿ, ನೋಡಮ್ಮಾ! ಮೈ ಚರ್ಮ........ಸುಲಿದಂತೆ.... ...ಎದ್ದು........ಹೋಗುತ್ತದೆ. ಅಲ್ಲಲ್ಲಿ........ ವ್ರಣಗಳೂ........ಬೇರೆ; ಕೀವೂ........ಸೋರುತ್ತಿದೆ. ಅಬ್ಬಬ್ಬಾ! ನರಕ ಯಾತನೆ! ಆ ದೇವ ನನ್ನನ್ನು ಇನ್ನೂ ಏಕೆ ಜೀವಂತವಿರಿಸಿರುವನೋ?

ಅಂಜಲಿ: (ಬಿಕ್ಕಿ ಬಿಕ್ಕಿ ಅಳುವ ಸದ್ದು) ಹೇ! ಭುವನೇಶ್ವರೀ!

(ಗಾಯತ್ರಿಯ ವಿಶೇಷ ನರಳಾಟ. ಬಲು ಕ್ಷೀಣ ಧ್ವನಿ)

ಅಂಜಲಿ: ಹೇ! ಮಹಾಕಾಳೀ—ಭೈರವಿ! ಇನ್ನೆಷ್ಟು ಬಲಿದಾನ ಬೇಕು ತಾಯೀ........ನಿನಗೆ!

[ಮಿಲಿಟರಿ ಝೀಪ್ ಭರದಿಂದ ಬರುವ ಸದ್ದು.]

ಅಂಜಲಿ: ನಾನು ಹೋಗಿ ಕೊಂಚ ಹಾಲು ತರುತ್ತೇನೆ.

ಗಾಯತ್ರಿ: ಬೇಡಾ! ಬೇಡಾ! ಅಂಜಲಿ, ಹೋಗಬೇಡಾ!

ಅಂಜಲಿ: ಇದೆಂಥ ಮಾತೂ, ಗಾಯತ್ರಿ! ನನಗಾಗಿ ನೀನು ಸಹಿಸಿದ ಕಷ್ಟ ಅಷ್ಟಿಷ್ಟಲ್ಲ! ಇಂದು ನಾನೇ ಹೋಗಿ ಹಾಲಿನ ಡಬ್ಬಿ ತರುವೆನು.

ಗಾಯತ್ರಿ: ಹೋಗಲೇ ಬೇಡ! ಜಗದಂಬೆಯಾಣೆ! ಹೋಗಬೇಡ!

ಅಂಜಲಿ: ನನಗಿದು ಅರ್ಥವೇ ಆಗುವುದಿಲ್ಲವಲ್ಲ.

ಗಾಯತ್ರಿ: ಅವರೆಲ್ಲಾ ತಾಜಾ ಪಶುಗಳು! ಸೊಕ್ಕಿನ ಕೋಣಗಳು! ದುರಾತ್ಮರು! ಕಾಮಾಂಧರು! ಅವರಿತ್ತ ಪ್ರಸಾದವಿದು,—ನನಗೆ!

[ಹೆಡೆಮೆಟ್ಟಿದ ಕಾಳಸರ್ಪನಂತೆ ಅಂಜಲಿ ಬುಸುಗುಟ್ಟುವಳು]

ಅಂಜಲಿ: ಸಿಕ್ಕಿತು! ಸಿಕ್ಕಿತು! ನನಗೆ ಸಿಕ್ಕಿತು! ನನ್ನ ಪತಿದೇವ

ತಲೆದಿಂಬಿನೊಳಗೆ ಅಡಗಿಸಿಟ್ಟ ಆ.... ರಿವಾಲ್ವರು. ಅಯ್ಯೋ! ತೋಟಿಗ ವಲ್ಲಾ! ಇವೆ, ಇಲ್ಲಿವೆ! ಜೈ, ಮಹಾಕಾಳಿ, ಜೈ!

[ಮಿಲಿಟರಿಯವರು ಬಾಗಿಲು ತೆರೆದು ಒಳಗೆ ಬರುವಾಗ ಆಗುವ ಬೂಟ್ಸಿನ ಸದ್ದು.]

೧ನೇ ಸಿಪಾಯಿ: Hallo! Hallo! ಇದು ಹೊಸ ಹಕ್ಕಿ.

೨ನೇ ಸಿಪಾಯಿ: ಹ್ಹಾ....!....Beauty! Beauty!

[ಮುನ್ನುಗ್ಗಿ ಬರುವ ಬೂಟ್ಸಿನ ಸದ್ದು. ದೊಡ್ಡ ಗಂಡಾಂತರ ಸೂಚಿಸುವ ಹಿಮ್ಮೇಳದ ಸಂಗೀತ.]

೩ನೇ ಸಿಪಾಯಿ: ಔ....ರ....ತ್—ಬಹೂತ್............

[ಮೇಲೆ ಮೇಲೆ ಏಳು ಗುಂಡುಗಳು ಹಾರುತ್ತವೆ. ಸಿಪಾಯಿಗಳು ಮುಗುಚಿ ಬೀಳುವ ಸದ್ದು. ಗಾಯತ್ರಿ ಕಿರುಚಿ ದಡೀಲೆಂದು ನೆಲಕ್ಕೆ ಬೀಳುವಳು. ಕರುಣಾ ಜನಕ ವಾದ್ಯಸಂಗೀತ.]

ಅಂಜಲಿ: ಆಬಾಲವೃದ್ಧರ ರಕ್ಷಣೆ, ಅಬಲೆಯರ ಮಾನರಕ್ಷಣೆ, ಶಾಂತಿ ಸ್ಥಾಪನೆ ನ್ಯಾಯಪರಿಪಾಲನೆ—ಇವಕ್ಕಾಗಿಯೇ ಹೋರಾಡುವ ಮಿಲಿಟರಿ ಯವರಿರುವರು! ಧೂರ್ತರೇ! ದುರಾತ್ಮರೇ! ನಿಮ್ಮ ಎದೆಗೆ ನನ್ನ ಎಡಗಾಲ ತುಳಿತ! ಶಹಭಾಷ್! ಗಾಯತ್ರೀ! ನಿನಗಾದ ಅತ್ಯಾಚಾರಕ್ಕೆ ತಕ್ಕ ಶಾಸ್ತಿ ವಿಧಿಸಿದೆನು. ನೋಡವ್ವಾ! ಅಯ್ಯೋ!—ಅಯ್ಯಯ್ಯೋ! ಏ! ಗಾಯತ್ರಿ— ನಿನ್ನ ಪ್ರಾಣಪಕ್ಷಿಯೂ ಹಾರಿಹೋಯಿತೇ! ಹೇ! ಭುವನೇಶ್ವರಿ............ ........ಭುವನೇಶ್ವರಿ! ನಾ—ನೇ ಭುವನೇಶ್ವರಿ!....ಹ್ಹಾ!....ಹ್ಹಾ!....ಹ್ಹಾ!

[ತಾಂಡವನೃತ್ಯ ಒಗ್ಗುವ ತಾಳವಾದ್ಯದೊಂದಿಗೆ ಭೈರವಿರಾಗವನ್ನೂ ಹಿಮ್ಮೇಳದ ವಾದ್ಯದವರು ನಿರೂಪಿಸುವರು.]

ಹ್ಹಾ!....ಹ್ಹಾ!....ಹ್ಹಾ! ರಕ್ತೇಶ್ವರಿ!....ನಾನೇ ರಕ್ತೇಶ್ವರಿ!........... ಹ್ಹಾ!....ಹ್ಹಾ!....ಹ್ಹಾ!....ನಾನೇ ಜಗದಂಬೆ!—ಮಹಾಕಾಳಿ........ನಾನೇ ಮಹಾಕಾಳಿ....ತರಿಕಿಟ ಥೈ....ದಿಮಿಕಿಟ ಥೈ ಥೈ ಥಕ್ಕ ಥೈ....ನವ ದುರ್ಗೆ! ....ನಾನೇ ನವದುರ್ಗೆ! ಹ್ಹಾ!....ಹ್ಹಾ!....ಹ್ಹಾ!....ನಾನೇ . ಆ ವಿಪ್ಲವದ ನಾರಿ! ಕರಾಳ ಭೈರವಿ! ಹ್ಹಾ!....ಹ್ಹಾ!....ಹ್ಹಾ! ತಾತಕಥೈ....ದಿಮಿತಕಥೈ —ದಿಮಿಕಿಟಥೈ. ಥೈ....ಥೈ....ಥೈ....ಥೈ. ಹ್ಹಾ! ಹ್ಹಾ! ಹ್ಹಾ!

ಸ್ವಾತಂತ್ರ್ಯದೇವಿ! ಸ್ವಾತಂತ್ರ್ಯದೇವಿ! ಸ್ವಾತಂತ್ರ್ಯದೇವಿ!

**ಸಂಪೂರ್ಣ.**

■■■■■■■■

Edited, Printed & Published by K. V. Shenoy
at The Prabhat Printers, Ltd., Mangalore.